# ಸಿದ್ಧಗಂಗಾ

ಸಂಪುಟ-29. ಸಂಚಿಕೆ-11. ನವೆಂಬರ್-1993.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಅಕ್ಷರ ಆಕ್ಷಯ ತನಸೇವೆ। ನನ್ನ ತಂದೆ
ಸಾಕ್ಷರ ಕ್ರಾಂತಿಯ ನಡೆಸಿರುವೆ। ಶ್ರೀಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ಬಸವ ಮಂತ್ರವ ಜಪಿಸಿ ಬಸವ ಪ್ರಣತಿಯ ಬೆಳಗಿ
ಬಸವಶ್ರೀ ಶಿಶುವಾಗಿ ಅರಳಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ನಿದ್ದೆ ಎಚ್ಚರಗಳಲಿ ದೀನದಲಿತರ ಸೇವೆ
ಸಿದ್ಧನಿನ್ನ ಬದುಕು ಪರಹಿತಕೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

—ಶ್ರೀ ಹೆಚ್. ವಿ. ವೀರಭದ್ರಯ್ಯ.

| ಲೇಖನ | ಲೇಖಕರು | ಪುಟ |
|---|---|---|



## ಶ್ರೀವಾಣಿ

### ಗಡಿಗೆ ಪರೀಕ್ಷೆ

ಶ್ರೀಮಠಕ್ಕೆ ನಲವತ್ತು ವರ್ಷಗಳ ಹಿಂದೆ ಒಬ್ಬ ರೈತ ಬರುತ್ತಿದ್ದ. ಕಟ್ಟಾಳು ಆರೋಗ್ಯವಂತ ಶ್ರದ್ಧಾಜೀವಿ ಹೊಲದ ಬೆಳೆ ಭಾಗ್ಯದೊಡನೆ ಬೆಳೆದು ಬಂದವನು. ಅವನ ಅನುಭವ ದೊಡ್ಡದು ವ್ಯವಸಾಯದ ಬದುಕಿನಲ್ಲಿ ಪರಿಶ್ರಮಗಳಿಸಿದ್ದ. ಮಠಕ್ಕೆ ಬಂದಾಗ ಸಂಜೆ ಹೊತ್ತು ಹೊಲಗಳ ಕಡೆಗೆ ತಿರುಗಾಟಕ್ಕೆ ಹೊರಟಾಗ ಜತೆಗೆ ಬರುತ್ತಿದ್ದ, ತನಗೆ ಗೊತ್ತಿದ್ದ ವ್ಯವಸಾಯದ ವಿಚಾರವನ್ನು ತಿಳಿಸುತ್ತಿದ್ದ. ಹೊಲದಲ್ಲಿ ಬೀಜ ಯಾವಾಗ ಬಿತ್ತಬೇಕು, ಕುಂಟೆ ಯಾವಾಗ ಹಾಕಬೇಕು. ಕಳೆಕೀಳುವ ಕ್ರಮ ಯಾವುದು, ಕಟಾವು ಮಾಡುವ ಬಗೆ ಹೇಗೆ, ಬಣವೆ ಹಾಕುವಾಗ ಅನುಸರಿಸಬೇಕಾದ ವಿಧಾನ ಹೇಗಿರಬೇಕು. ಮುಂತಾಗಿ ಒಂದೊಂದನ್ನೂ ವಿವರಿಸುತ್ತಿದ್ದ. ಒಮ್ಮೆ ಹೊಲವನ್ನು ಉತ್ತ ಸಮಯ. ಬೀಜ ಬಿತ್ತಬೇಕು ಎಂದು ಆಲೋಚನೆ ಮಾಡುತ್ತಿದ್ದ ಸಂದರ್ಭ. ಆತ ಒಂದು ಮಾತು ಹೇಳಿದ. “ ಬುದ್ದೀ ಬೀಜ ಬಿತ್ತುವ ಮುಂಚೆ ಗಡಿಗೆ ಪರೀಕ್ಷೆ ಮಾಡಬೇಕು ” ಎಂದ. ಅರ್ಥವಾಗಲಿಲ್ಲ ಅವನೇ ಮುಂದುವರಿದು ಹೇಳಿದ. “ ಬುದ್ದೀ ನಮ್ಮಲ್ಲಿ ಒಂದು ಪದ್ಧತಿಯಿದೆ. ಬೀಜ ಬಿತ್ತುವುದಕ್ಕೆ ಮೊದಲು ಉತ್ತ ಹೊಲದಲ್ಲಿ ತುಂಬಿದ ಗಡಿಗೆಯನ್ನು ಆಳೆತ್ತರದಿಂದ ಕೆಳಕ್ಕೆ ಹಾಕಬೇಕು, ಹಾಗೆ ಹಾಕಿದಾಗ ಗಡಿಗೆ ಒಡೆದು ಹೋದರೆ ಬೀಜ ಬಿತ್ತಬಾರದು. ಒಡೆಯದೆ ಹಾಗೆಯೇ ಉಳಿದರೆ ಬೀಜ ಬಿತ್ತಬಹುದು. “ – ಎಂದ. ಆಶ್ಚರ್ಯವಾಯಿತು. ಎಂಥ ಅನುಭವದ ಮಾತು ಶ್ರದ್ಧೆಯಿಂದ, ನಿಷ್ಠೆಯಿಂದ ಪ್ರಕೃತಿಯೊಂದಿಗೆ ಸಂವಾದ ಮಾಡುವ ವಿಧಾನವಿದಲ್ಲವೆ ಎನಿಸಿತು “ಹದನೋಡಿಹರಗು ಬೆದೆನೋಡಿ ಬಿತ್ತು’ – ಎನ್ನುತ್ತದೆ ಅನುಭವವಾಣಿ, ಹಿರಿಯರ ನಿಷ್ಠೆ, ಕಾಯಕ ಶ್ರದ್ಧೆ ಮೌಲಿಕವಾಗಿತ್ತು. ನಾವು ಮಾಡುವ ಕೆಲಸದಲ್ಲಿ ನಮಗೆ ಶ್ರದ್ಧೆ ಇರಬೇಕು, ನಿಷ್ಠೆ ಬೆಳೆಯಬೇಕು. ಬೇಸಾಯ ಪವಿತ್ರವಾದ ಕಾಯಕ ಬಸವಣ್ಣನವರು ಅದಕ್ಕಾಗಿಯೇ “ಕೃಷಿಕೃತ್ಯ ಕಾಯಕದ ಸದ್ಭಕ್ತರ ಪಾದವತೋರಯ್ಯಾ ’ ಎಂದು ಕೂಡಲಸಂಗಮನನ್ನು ಪ್ರಾರ್ಥಿಸಿದ್ದಾರೆ. ವ್ಯವಸಾಯದ ಬಗ್ಗೆ ಇಂದಿನ ಯುವ ಜನಾಂಗ ಭಕ್ತಿ ಬೆಳೆಸಿಕೊಳ್ಳಬೇಕು. “ ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು” ಎಂಬುದನ್ನು ಮರೆಯಬಾರದು.

(ದಿ. 13-3-93 ರಂದು ಮಳವಳ್ಳಿ ತಾ|| ಡಿ. ಹಲಸಹಳ್ಳಿ ಷಡಕ್ಷರ ಗವಿಮಠದ ನೂತನ ಶ್ರೀಗಳಾದ ಪೂಜ್ಯ ಷಡಕ್ಷರಿಸ್ವಾಮಿಗಳ ಪಟ್ಟಾಧಿಕಾರ ಸಂದರ್ಭದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ)

# ಶಾಸ್ತ್ರೋಕ್ತವಾಗಿ ತಯಾರಿಸಿದ ಸುಗಂಧ ಸಾಮಗ್ರಿಗಳು

ಪ್ರಖ್ಯಾತವಾದ

- ಪರಿಮಳದಶಾಂಗ
- ದೂಪದ ಕೊಡ
- ವಿಭೂತಿ
- ಹವನ ಸಾಮಗ್ರಿಗಳ

ತಯಾರಕರು









ಶಿವಪೂಜಾ
ಸಾಮಗ್ರಿಗಳು ದೊರೆಯುತ್ತದೆ.




ಫೋನ್ : ಅಂಗಡಿ — 28009 ಮನೆ — 224623.

ವೈ. ಬಸಪ್ಪ, ... ಬೆಂಗಳೂರು 560002

## ಶ್ರೀ ಸಿದ್ಧಲಿಂಗೇಶ್ವರ ವಚನ



ಕಾಯ ಲಿಂಗಾರ್ಪಿತವಾದ ಬಳಿಕ
ಕರ್ಮತ್ರಯಂಗಳು ಇರಲಾಗದು ನೋಡಾ !
ಜೀವ ಲಿಂಗಾರ್ಪಿತವಾದ ಬಳಿಕ
ಸಂಸಾರ ವ್ಯಾಪ್ತಿಯುಹಂಥ ಜೀವನ ಗುಣವಿರಲಾಗದು
ಅದು ಅರ್ಪಿತವಲ್ಲ ನೋಡಾ !
ಕರಣಂಗಳು ಲಿಂಗಾರ್ಪಿತವಾದ ಬಳಿಕ
ಆ ಕರಣಂಗಳೆಲ್ಲವೂ ಲಿಂಗಕಿರಣಂಗಳಾಗಿ
ಆ ಲಿಂಗಕಿರಣವೇ ಹರಣವಾಗಿರಬೇಕು ನೋಡಾ
ಕಾಯುದ ಜೀವದ ಕರಣದ ಗುಣವ ಕಳೆಯದೆ
ಲಿಂಗಾರ್ಪಿತ ಪ್ರಸಾದಿಗಳೆಂಬ ಪ್ರಪಂಚಿಗಳ ಮೆಚ್ಚನು ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !

ಬೆಂಕಿಗೆ ಕಟ್ಟಿಗೆಗಳನ್ನು ಅರ್ಪಿಸಿದರೆ ಕಟ್ಟಿಗೆಗಳೆಲ್ಲವೂ ಬೆಂಕಿಯೇ ಆಗಿಬಿಡುವುದಿಲ್ಲವೆ ? ಹಾಗೆ ಭೌತಿಕವಾದ ಕಾಯ ಕರಣಗಳನ್ನು ಹಾಗು ಜೀವನವನ್ನು ಲಿಂಗಕ್ಕರ್ಪಿಸಿದಲ್ಲಿ ಅವೆಲ್ಲ ತಮ್ಮ ಭೌತಿಕತನವನ್ನು ಕಳೆದು ಕೊಂಡು ಲಿಂಗರೂಪವೇ ಆಗುವುವು. ತಮ್ಮ ಶರೀರಾದಿ ಪ್ರಾಕೃತಿಕ ಗುಣ-ಗಳನ್ನು ಕಳೆಯದಲೆ ತಾವು ಪ್ರಸಾದಿಗಳೆಂದು ಹೇಳಿಕೊಳ್ಳುವ ಪ್ರಪಂಚಿಗಳನ್ನು ದೇವನು ಎಂದೂ ಮೆಚ್ಚಲಾರನು. ದೇವನಿಗೆ ತಿಳಿಯದಂತೆ ಯಾರು ಏನು ಮಾಡಲು ಸಾಧ್ಯವಿದೆ ?

(ಕೃಪೆ :- ಷಟ್‌ಸ್ಥಲ ಜ್ಞಾನಸಾರಾಮೃತ, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾ ಸಂಘ, ಎಡೆಯೂರು.ಗದಗ)

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ - 572 104
ತುಮಕೂರು ಜಿಲ್ಲೆ

ಡಾ|| ಎಂ. ಎಸ್. ಚನ್ನಬಸಪ್ಪ
ಪ್ರಧಾನ ಕಾರ್ಯದರ್ಶಿಗಳು
ಹಳೆಯ ವಿದ್ಯಾರ್ಥಿ ಸಂಘ

* * *

ಪ|| ಚನ್ನಪ್ಪ ಎರೇಸೀಮೆ
ಪ್ರಧಾನ ಸಂಪಾದಕರು

* * *

ಹೆಚ್. ವಿ. ವೀರಭದ್ರಯ್ಯ
ಸಂಪಾದಕರು

* * *

ಬಿ. ವೀರಭದ್ರಯ್ಯ
ಪಿ. ಎಸ್. ಚಂದ್ರಶೇಖರಯ್ಯ
ಎಂ. ರೇಣುಕಾರಾಧ್ಯ
ಸಂಪಾದಕ ಮಂಡಳಿ

* * *

ಹೆಚ್. ಬಿ. ಗಂಗಾಧರಯ್ಯ
ಪ್ರಕಾಶಕರು

* * *

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಮುದ್ರಣಾಲಯ
ಮುದ್ರಕರು

* * *

ಶ್ರೀ ಸಿದ್ಧಗಂಗಾಕ್ಷೇತ್ರ
ಪ್ರಕಟಣೆಯ ಸ್ಥಳ

### ಚಂದಾ ವಿವರ

ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 300-00


## ಲೇಖಕರಲ್ಲಿ ಮನವಿ

ಸಿದ್ಧಗಂಗಾ ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ ಮೇಲಾಗಿ ಶ್ರೀ ಮಠದ ಮುಖವಾಣಿ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿ ಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರ ಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.


" ಸಂಪಾದಕರು "
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ-572104.


ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ



ದೀಪಾವಳಿ, ನಾಡಿಗೆ ಬೆಳಕಿನ ಹಬ್ಬ. ಎಲ್ಲೆಲ್ಲೂ ದೀಪಗಳ ಸಾಲು ಸಾಲು. ವಿದ್ಯುದ್ದೀಪಗಳ ಆಕರ್ಷಕ ಅಲಂಕಾರ. ಮನೆ ಮನೆಗಳ ಮುಂದೆ ನಂದಾ ದೀಪಗಳ ತಂಪು ಪ್ರಕಾಶ. ಪೌರಾಣಿಕ ಹಿನ್ನೆಲೆಯಲ್ಲಿ ಮೂಡಿ ಬಂದ ದೀಪಾವಳಿಗೆ ವಿವಿಧ ಸಂಸ್ಕೃತಿಯಲ್ಲಿ ವೈವಿಧ್ಯ ಪೂರ್ಣ ವ್ಯಾಖ್ಯಾನಗಳು. ಕತ್ತಲನ್ನು ಕಳೆದು ಬೆಳಕಿನತ್ತ ಹೆಜ್ಜೆಯಿಡುವ ಆಕಾಂಕ್ಷೆ. ಹಬ್ಬದ ಆಚರಣೆಯ ಸಂತಸಕ್ಕೆ ಬಾಣ, ಬಿರುಸುಗಳ ಘೋಷ. ಬಲಿಯ ಸಂಹಾರ. ಅಜ್ಞಾನದ ಬಲಿಯ ಸಂಹಾರ. ಕತ್ತಲಿನ ಗರ್ಭದಿಂದಲೇ ಮೈಮುರಿದೆದ್ದು ಬರುವ ಬೆಳಕಿನ ಅವತಾರ. ನರವಿಂಧ್ಯಾಟವಿಗೆ ಎಷ್ಟು ಬೆಳಕಿನ ದೀಪಗಳನ್ನು ಹಚ್ಚುತ್ತ ಬಂದದ್ದು. ಬೆಳಕನ್ನೂ ಕತ್ತಲೆಮಾಡಿ ಬದುಕುವ "ನರರು ಸುರರಸುರರಿಗಿಂತ" ಬಲ್ಲಿದರಾಗಿದ್ದಾರೆ. ವಿಚಾರದ ಹೆಸರಿನಲ್ಲಿ ಬೆಳಕಿನ ಕತ್ತಲನ್ನೂ ಮರೆಸುವ ನಾಟಕ ನಡೆದಿದೆ. ಪ್ರೀತಿಯ ಸಂಕೇತವಾದ ಬೆಳಕನ್ನು ಭೀತಿಯ ಕತ್ತಲನ್ನಾಗಿಸಿ ನರ್ತಿಸುತ್ತಿರುವ ದೃಶ್ಯಗಳೇ ಎತ್ತೆತ್ತಲೂ ಬೆಳಕೂ ನಾಚುವಂಥ ದಿವಾಳಿಯಾಗಿದೆ. ದೀಪಾವಳಿ ಹಣ ಮಾಡಬೇಕು ಎಂಬುದೊಂದೇ ಇಂದೆಲ್ಲ ನಡೆದಿರುವ ದೀಪಾವಳಿ ಮಾನವೀಯತೆಯ ಬಗ್ಗೆ ಎಲ್ಲೆಲ್ಲೂ ಕತ್ತಲು. ತಾಯ ಗರ್ಭದಲ್ಲಿಯೂ ಕತ್ತಲು ಹೆರುವ ಮಗುವನ್ನು ಮನುಷ್ಯನನ್ನಾಗಿ ಮಾಡುತ್ತೇನೆಂಬ ಮಾತೃಧರ್ಮವೇ ಕತ್ತಲಾಗುತ್ತಿದೆ. ಹೆರುವ ಮಗುವನ್ನು ಹಣತರುವ ಯಂತ್ರವನ್ನಾಗಿಸಬೇಕೆಂಬ ಕತ್ತಲಿನ ಕನಸು. ಓದಿಸುವ ಮಗನನ್ನು, ಮಗಳನ್ನು ದುಡ್ಡನ್ನು ಹೆರುವ ಯಂತ್ರವನ್ನಾಗಿಸುವ ಬೆಳಕೆಂಬ ಕತ್ತಲಿನ ಕಾಂಕ್ಷೆ. ಹಣದ ಮಳೆಗರೆವ ಅಧಿಕಾರ ಹಿಡಿವ ಭಗೀರಥ ಪ್ರಯತ್ನದ ಕತ್ತಲಿನ ಪೂಜೆ. ಒಳಗನ್ನು ಅರಿಯಬೇಕೆಂಬ, ಬೆಳಗಬೇಕೆಂಬ ತಿಳಿವಿನಿಂದ ದೂರಾದ ದೀಪಾವಳಿ ಹಬ್ಬ. ದೀಪಗಳ ಸಾಲು ಸಾಲಿನಹಬ್ಬ. ಹೊರಗೆ ಬೆಳಕು ಚೆಲ್ಲುವ ದೀಪಾವಳಿ ಒಳಗೆಲ್ಲ ಕತ್ತಲನ್ನೇ ಕವಿಸುತ್ತ ಬರುತ್ತಿದ್ದರೂ ಚಿಂತಿಸದ 'ಮನಸ್ಸು'ಗಳು ಬೆಳಕಿನ ಪೂಜೆ. ಜ್ಞಾನದ ಪೂಜೆಯಾಗ ಬೇಕು. ಮಾನವೀಯತೆಯ ಪೂಜೆಯಾಗ ಬೇಕು "ತಮಂಧ ಘನ ಜ್ಯೋತಿ ಕಿರಿದೆನ್ನಬಹುದೇ?" ಎಂಬ ಬಸವಣ್ಣನವರ ವಾಣಿ ಕಾರ್ಯ ಜೀವನ ಜ್ಯೋತಿಯಾಗಬೇಕು. ಆಗಲ್ಲವೆ ದೀಪಾವಳಿ ?



# ದೀಪಾವಳಿ



ಶಾರದಾ ಜಡೆ, 330, ಹೆಚ್ ಐ ಜಿ, ಬಿ ಹೆಚ್ ಇ ಎಲ್. ಹೈದ್ರಾಬಾದ್ 500032

ಓ, ತಾಯಿ ಭಾರತೀ !
ಇದು ನಿನಗೆ ದೀಪಾವಳಿಯೇ!
ಎತ್ತ ನೋಡಿದರತ್ತ ;
ಗುಂಡುಗಳ ಹಾರಾಟ ;
ಕಾಶ್ಮೀರ ಕೊಳ್ಳದಲಿ ;
ಬಾಂಬುಗಳ ಸಿಡಿದಾಟ ;
ಮಹಾರಾಷ್ಟ್ರ ಭೂಮಿಯಲಿ ;
ಭಯಾನಕ ನಡುಗಾಟ ;
ಇನ್ನು ರಾಜ್ಯಗಳಲ್ಲೋ ?
ಕುರ್ಚಿಗಾಗಿ ಹೊಂಬರಾಟ ;
ಆದರೂ ;
ಅನಾದಿ ಕಾಲದ ರೂಢಿ ,
ಅಳಿಸಲಾಗದೇ ನಾವು ,
ದೀಪಗಳ ಬೆಳಗುತ್ತೇವೆ ,
ಹೂವುಗಳ ಚೆಲ್ಲುತ್ತೇವೆ ;
ಎಂದಾದರೊಂದು ದಿನ,
ತಂಬೆಳಕು ಸೂಸಲೆಂದು,
ನಿನ್ನನೇ ಬೇಡುತ್ತೇವೆ.

# ಯುಗ ಪುರುಷ ವಿವೇಕಾನಂದ

–ಶಾರದ ಗೋಪಾಲ್, M.A. ದುದ್ದ, ಮಂಡ್ಯ ಜಿಲ್ಲೆ.

ಅನೇಕ ಮಹಾತ್ಮರುಗಳಿಗೆ ಜನ್ಮವಿತ್ತ ನಮ್ಮ ಭರತ ಭೂಮಿಯು ಸ್ವಾಮಿ ವಿವೇಕಾನಂದರಂತಹ ವೀರ, ಶೂರ ಅಧ್ಯಾತ್ಮ ಜೀವಿಯನ್ನು ಪಡೆದ ಪುಣ್ಯ ಭೂಮಿ ನಮ್ಮ ಭಾರತ. ಇಡೀ ವಿಶ್ವದ ಗಮನವನ್ನು ತನ್ನಡೆ ಸೆಳೆದ ಮಹಾನ್ ಯುಗಪುರುಷ ಸ್ವಾಮಿ ವಿವೇಕಾನಂದ. ವಿಶ್ವದ ಎಲ್ಲೆಡೆ "ಭಾರತ" ಎಂದರೆ ಸಾಕು- ಬಡತನದಿಂದ ನರಳುತ್ತಿರುವ, ವಿದ್ಯೆಯ ಗಂಧವೂ ಇಲ್ಲದ ಭಿಕ್ಷುಕರ ದೇಶ ಭಾರತ ಎಂದು ಪ್ರಸಿದ್ಧಿಯಾಗಿತ್ತು. ಆದರೆ ಸ್ವಾಮಿ ವಿವೇಕಾನಂದರ ಮನಸ್ಸು ಭಾರತದ ಹೀನ ಸ್ಥಿತಿಯನ್ನು ಕಂಡು ಮರುಗಿತು. ಎಲ್ಲಾ ಸಂಪತ್ತಿಗಿಂತಲೂ ಎಲ್ಲ ವಿದ್ಯೆಗಿಂತಲೂ ಮಿಗಿಲಾದ ಸಂಪತ್ತು ನಮ್ಮ ಸನಾತನ ಧರ್ಮವಾಗಿದೆ. ಯಾವ ವಿದ್ಯೆಯ ಮುಂದೆ ಯತ್ಸಾವ ವಿದ್ಯೆಯು ಅವಶ್ಯಕತೆಯೂ ಇಲ್ಲವೋ ಅಂತಹ ಬ್ರಹ್ಮವಿದ್ಯೆಯ ತವರು ಮನೆಯೇ ನಮ್ಮ ಭಾರತ ಆಗಿರುವಾಗ, ನಮ್ಮ ದೇಶ ಹೇಗೆ ದರಿದ್ರ ದೇಶವೆನಿಸು ತ್ತದೆ. ಪ್ರಪಂಚದ ಎಲ್ಲಾ ವಿದ್ಯೆಗಳನ್ನು ಕಲಿತರೂ ಯಾವ ವಿದ್ಯೆಯನ್ನು ಕಲಿಯುವ ತನಕ ಮಾನವ ಪರಿಪೂರ್ಣನೆನಿಸುವುದಿಲ್ಲವೊ ಅಂತಹ ಪವಿತ್ರ ಬ್ರಹ್ಮ ವಿದ್ಯೆಯ ಭಂಢಾರವೇ ನಮ್ಮದಾಗಿರುವಾಗ ನಾವು ಹೇಗೆ ದಡ್ಡರಾಗುತ್ತೇವೆ! ನಾವು ಖಂಡಿತ ದಡ್ಡರಲ್ಲ, ಪೆದ್ದರಲ್ಲ, ನಾವೂ ಮನುಷ್ಯರು. ದೇಶದ ಇತರ ಎಲ್ಲಾ ಜನರಂತೆ ನಾವೂ ಪವಿತ್ರಾತ್ಮರು. ಇಡಿ ವಿಶ್ವಕ್ಕೇ ಅವಶ್ಯಕವಾಗಿ ಬೇಕಾಗಿರುವಂತಹ ಅಮೂಲ್ಯವಾದ ಸಂಪತ್ತು ನಮ್ಮಲ್ಲಿ ಇದೆ. ಅದೇ ನಮ್ಮ ಹಿಂದೂ ಧರ್ಮ, ಸನಾತನ ಧರ್ಮ ಎಂದು ತೋರಿಸಿಕೊಟ್ಟವರೇ ಸ್ವಾಮಿ ವಿವೇಕಾನಂದರು,

ಕುರಿಗಳ ಗುಂಪಿನಲ್ಲಿ ಬೆಳೆದ ಹುಲಿಮರಿಯು ದೊಡ್ಡದಾದ ಮೇಲೂ ತಾನೂ ಕುರಿಮರಿಯೇ ಎಂದು ತಿಳಿದು ಕುರಿಯಂತೆಯೇ ತಾನೂ ಸಹವರ್ತಿಸಿತಂತೆ. ಅಂತೆಯೇ ಅಂಧಕಾರದಲ್ಲಿ ಮುಳುಗಿದ್ದ ಭಾರತವನ್ನು ಅದರಲ್ಲೂ ಭಾರತದ ಯುವ ಜನತೆಯನ್ನು ಬಡಿದೆಬ್ಬಿಸಿದ ಶೂರನೇ ಸ್ವಾಮಿ ವಿವೇಕಾನಂದರು. ಪ್ರತಿಯೊಬ್ಬರಿಗೂ ತಮ್ಮಲಿಯೇ ಇರುವ ಧೀ ಶಕ್ತಿಯನ್ನು ತೋರಿಸಿ " ನೀವು ಕುರಿಗಳಲ್ಲ. ನಿಮ್ಮಲ್ಲಿ ಅದಮ್ಯವಾದ ಚೇತನವಿದೆ. ಏಳಿ....... ಸಿದ್ದೆಯಿಂದ ಎದ್ದೇಳಿ.........ನಿಮ್ಮಲ್ಲಿ ಮನೆ ಮಾಡಿರುವ ಸೋಮಾರಿತನ ಅಹಂಕಾರ ಇವುಗಳನ್ನು ಬಡಿದೋಡಿಸಿ. ನೀವು ಕುರಿಗಳಂತಾಗದೆ ಪುರುಷ ಸಿಂಹರಾಗಿ ಬಾಳಿ......." ಎಂದು ಭಾರತೀಯರನ್ನು ಬಡಿದೆಬ್ಬಿಸಿ ಹುರಿ-ದುಂಬಿಸಿದ ಧೀರೋದ್ದಾತ ಪುರುಷರೇ ಸ್ವಾಮಿ ವಿವೇಕಾನಂದರು.

ಸ್ವಾಮೀಜಿಯವರಿಗೆ ಸೋಮಾರಿಗಳನ್ನು ಕಂಡರೆ ಆಗುತ್ತಿರಲಿಲ್ಲ. ಹೀಗೆ ಹೇಳು-ತ್ತಿದ್ದರು, ' ದೇವರು ಕೂಡ ಸೋಮಾರಿಗೆ ಸಹಾಯ ಮಾಡುವುದಿಲ್ಲ. ಯಾವಾಗ ಸೊಂಟ ಕಟ್ಟುತ್ತೇವೆಯೋ ಆಗ ಅವನ ಶಕ್ತಿ ನಮ್ಮ ನೆರವಿಗೆ ಬರುವುದು' ಎನ್ನುತ್ತಿದ್ದರು.

ಹೊರದೇಶಗಳಲ್ಲಿ ಸಂಚರಿಸಿ ನಮ್ಮ ಭಾರತದ ಸನಾತನ ಧರ್ಮವನ್ನು ವಿಶ್ವದ ಎಲ್ಲೆಡೆ ಸಾರಿದರು. ನಮ್ಮ ದೇಶದ ಬಡ ಜನರ ಕಷ್ಟ-ಕಾರ್ಪಣ್ಯಗಳನ್ನು ಕಂಡು ಮರುಗಿದರು. ಅವರನ್ನು ಬಡತನದ ರೇಖೆಯಿಂದ, ಅಜ್ಞಾನದ ಅಂಧಕಾರದಿಂದ ಮೇಲೆತ್ತಲು ತಮ್ಮ ಜೀವನವನ್ನೇ ಮುಡಿಪಾಗಿಟ್ಟಿದ್ದರು. ಕನ್ಯಾಕುಮಾರಿಯ ತಪ್ಪಲಿನಲ್ಲಿ ಈ ಬಗ್ಗೆ ಚಿಂತಿಸಿ ಸುರಿಸಿದ ಅವರ ಯೋಗಾಶ್ರುಗಳು ನಮ್ಮ ಭಾರತವನ್ನೇ ಉದ್ಧರಿಸಿತು. ವಿಶ್ವದ ಎಲ್ಲೆಡೆ ನಮ್ಮ ಬ್ರಹ್ಮವಿದ್ಯೆಯನ್ನು ಸಾರಿದರು. ಅದರ ಬದಲಾಗಿ ನಮ್ಮ ದೇಶದ ಬಡ ಜನತೆಗಾಗಿ ಭಿಕ್ಷೆಯನ್ನು ಬೇಡಿದರು. ನಮ್ಮ ದೇಶದ ಪವಿತ್ರ ಗ್ರಂಥಗಳಾದ ಭಗವದ್ಗೀತೆ, ರಾಮಾಯಣ, ಮಹಾಭಾರತಗಳು ಮತ್ತು ಪುರಾಣಗಳಲ್ಲಿರುವ ಅತ್ಯಮೂಲ್ಯವಾದ ವಿಷಯಗಳನ್ನು ಎಲ್ಲೆಡೆ ಸಾರಿದರು.

ಸ್ವಾಮಿ ವಿವೇಕಾನಂದರು ಪ್ರಚಂಡ ಜ್ಞಾಪಕ ಶಕ್ತಿಯನ್ನು ಹೊಂದಿದ್ದರು. ಒಮ್ಮೆ ಗ್ರಂಥಾಲಯದಲ್ಲಿ ದೊಡ್ಡ ದೊಡ್ಡ ಗ್ರಂಥಗಳನ್ನು ಓದುತ್ತಿದ್ದರು. ಎಷ್ಟು ಶೀಘ್ರಗತಿಯಲ್ಲಿ ಎಂದರೆ, ಒಂದೇ ದಿನ ಒಂದಾದ ಮೇಲೊಂದರಂತೆ ಹಲವಾರು ದೊಡ್ಡ ದೊಡ್ಡ ಗ್ರಂಥಗಳನ್ನೆ ಓದಿ ಮುಗಿಸಿಬಿಟ್ಟರು. ಇದನ್ನೆಲ್ಲಾ ಸುಮ್ಮನೆ ನೋಡುತ್ತಿದ್ದ ಗ್ರಂಥಪಾಲಕನು ಸ್ವಾಮಿ ವಿವೇಕಾನಂದರು ಮನೆಗೆ ಹೊರಟಾಗ ತರಾಟೆಗೆ ತೆಗೆದುಕೊಂಡರು, ಏನಯ್ಯ, ಇದೇನು ಮಕ್ಕಳಾಟವೇ ಎಲ್ಲಾ ಗ್ರಂಥಗಳನ್ನು ಒಂದೇ ದಿನ ಓದಲು ಸಾಧ್ಯವೆ, ಇದು ವೃಥಾ ಕಾಲಾಹರಣ ಅಷ್ಟೇ ಎಂದು ಗೊಣ-ಗಾಡಿದನು. ಆದರೆ ಸ್ವಾಮಿ ವಿವೇಕಾನಂದರು ತಾವು ಇದುವರೆಗೆ ಓದಿದ ಯಾವುದೇ ಪುಸ್ತಕದಲ್ಲಿ ಯಾವುದೇ ಪುಟದಲ್ಲಿ ಇರುವ ವಿಷಯಗಳನ್ನು ಹೇಳಬಲ್ಲೆ ಬೇಕಾದರೆ ನೀವು ಪರೀಕ್ಷಿಸ ಬಹುದೆಂದರು. ಸಿಟ್ಟಿನಿಂದ ಗ್ರಂಥಪಾಲಕನು ಪ್ರತಿಯೊಂದು ಗ್ರಂಥದಲ್ಲೂ ಕೇಳಿದನು. ಪುಟದ ನಂಬರ್ ಹೇಳಿದರೆ ಸಾಕು ಅಲ್ಲಿರುವ ವಿಷಯಗಳನ್ನು ಚಾಚೂ ತಪ್ಪದೆ ಸ್ವಾಮೀಜಿಯವರು ಒಪ್ಪಿಸುತ್ತಿದ್ದರು. ಅವರ ಈ ಪ್ರಚಂಡ ಜ್ಞಾಪಕ ಶಕ್ತಿ-ಯನ್ನು ಕಂಡು ಗ್ರಂಥಪಾಲಕನಿಗೆ ಆದ ಆಶ್ಚರ್ಯ ಅಷ್ಟಿಷ್ಟಲ್ಲ. ಕೊನೆಗೆ ಗ್ರಂಥ ಪಾಲಕನು ತನ್ನ ತಪ್ಪಿಗೆ ಕ್ಷಮಿಸೆಂದು ಸ್ವಾಮೀಜಿಯವರಲ್ಲಿ ಕಾಲಿಗೆ ಬಿದ್ದು ಕ್ಷಮೆ ಬೇಡುತ್ತಾನೆ. ಇಂತಹ ಪವಾಡ ಸದೃಶ ಸತ್ಯವನ್ನು ಆತನು ಎಲ್ಲೂ ಕಂಡಿರಲಿಲ್ಲ.

ಸ್ವಾಮಿ ವಿವೇಕಾನಂದರು ಒಳ್ಳೆಯ ಕಟ್ಟುಮಸ್ತಾದ ಎತ್ತರದ ಆಳಾಗಿದ್ದರು. ಯುವ ಜನತೆಯನ್ನು ಒಳ್ಳೆಯ ಆರೋಗ್ಯವನ್ನು ಹೊಂದುವಂತೆ ಪ್ರಚೋದಿಸುತ್ತಿದ್ದರು. ಒಳ್ಳೆಯ ಆರೋಗ್ಯವಂತ ದೇಹದಿಂದ ಮಾತ್ರ ನಾವು ಜೀವನದಲ್ಲಿ ಏನನ್ನಾದರೂ ಸಾಧಿಸಲು ಸಾಧ್ಯ ಎನ್ನುತ್ತಿದ್ದರು. ಇಂದಿನ ಈ ವಿಜ್ಞಾನ ಯುಗದಲ್ಲಿ ಸ್ವಾಮಿ ವಿವೇಕನಂದರ ಬೋಧನೆಗಳು ಅತ್ಯಾವಶ್ಯಕವಾಗಿವೆ.

ಚಿಕಾಗೋನಲ್ಲಿ ನಡೆದ ವಿಶ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಿದ ಸ್ವಾಮಿ ವಿವೇಕಾನಂದರು ಒಂದೇ ದಿನದ ತಮ್ಮ ಪ್ರಬುದ್ಧ ಭಾಷಣದಿಂದಾಗಿ ವಿಶ್ವಮಾನವರಾಗಿ ಪ್ರಸಿದ್ಧಿಯಾದರು. ಈ ವಿಜ್ಞಾನ ಯುಗದಲ್ಲಿ ಯಂತ್ರಗಳಂತೆಯೇ ನೀರಸ ಯಾಂತ್ರಿಕ ಜೀವನ ನಡೆಸುತ್ತಿದ್ದ ಹೊರದೇಶದ ಜನರು, ಜೀವನ ಎಂದರೇನು, ನಾವು ಯಾವ ರೀತಿಯ ಜೀವನವನ್ನು ನಡೆಸಬೇಕು, ಮಾನವ ಜನ್ಮ ಎಷ್ಟು ಅಮೂಲ್ಯವಾದದು, ಧರ್ಮ ದೇವರು ಮುಂತಾದ ವಿಷಯಗಳನ್ನು ತಿಳಿಸಿ ಜೀವನವನ್ನು ಹೇಗೆ ಸಾರ್ಥಕ ಪಡಿಸಿಕೊಳ್ಳಬೇಕೆಂದು ತಿಳಿಸಿಕೊಟ್ಟರು ಸರ್ವವೂ ಬ್ರಹ್ಮಮಯ ಎಂದು ಸಾರಿದರು. ಎಲ್ಲದರಲ್ಲಿಯೂ, ಎಲ್ಲರಲ್ಲಿಯೂ ಒಬ್ಬನೇ ನೆಲೆಸಿರುವುದು ಎಂದು ಸಾರಿದರು. ಯಾಂತ್ರಿಕ ಜೀವನಕ್ಕೆ ಜೀವನದ ಗುರಿಯಾದ ಬ್ರಹ್ಮಪದವಿಗೇರಲು ದಾರಿ ತೋರಿದರು. ವಿಶ್ವದ ಎಲ್ಲೆಡೆ ಜನರನ್ನು ಅಸತ್ತಿನಿಂದ-ಸತ್ಮದೆಡೆಗೆ, ಕತ್ತಲೆಯಿಂದ-ಬೆಳಕಿನಕಡೆಗೆ ಕೈ ಹಿಡಿದು ನಡೆಸಿದರು. ವಿಶ್ವಮಾನವರಾಗಿ ಬಾಳಿದರು.

ಅವರ ಚಿಂತನೆಗಳ ಬಗ್ಗೆ ಹೆಚ್ಚು ಹೆಚ್ಚು ಗ್ರಂಥಗಳನ್ನೋದಿ ತಿಳಿದು ನಮ್ಮ ಜೀವನದಲ್ಲಿ ಪಾಲಿಸಿದುದೇ ಆದಲ್ಲಿ ಖಂಡಿತ ನಮ್ಮ ದೇಶದ ಉದ್ಧಾರ ಸಾಧ್ಯವಾಗಬಲ್ಲದು.

## ನಿಸ್ಸೀಮ ಚೆಲುವ

ಹಿಡಿಮುಷ್ಟಿ ಹೃದಯ ಹಿಡಿದಿತ್ತು ವಿಶ್ವ
ನರನಲ್ಲಿ ಮೂಡಿತ್ತು ಅನುರತ್ನ ಭಾಷ್ಯ।
ಹಸಿರ ಉಸಿರಲಿ ಹಬ್ಬಿತೊ ಕಾಶಿ।
ನೀನಿಟ್ಟ ಹೆಜ್ಜೆಯಲಿ ಮೂಡಿತೊ ಕಾಶಿ।
ಸಿದ್ಧ ಬುದ್ಧರ ಜಯಂತಿಯಲಿ ಮೈಮರೆತ ಲೋಕ
ತನ್ನ ನೂಲಿನಲಿ ತಾನೆ ನರಳುವ ತರಣಿಯಂಥ ನರಕ
ಭವಸನ್ನಿಧಿಯ ಭಕ್ತಿಯಾಗಿರೂಪುಗೊಂಡವ

# ದೇವರನ್ನು ಕಾಣಬಲ್ಲೆವೆ ?

-ಪ. ರಾಮಕೃಷ್ಣಶಾಸ್ತ್ರಿ, ಶಿವಶಕ್ತಿ ನಿಲಯ, ಮಚ್ಚಿನ, (ದ.ಕ.)

ಒಬ್ಬ ಆಂಗ್ಲ ಮಹಿಳೆ ರಾಮಕೃಷ್ಣ ಪರಮಹಂಸರ ಬಳಿಗೆ ಬಂದು, ನೀವು ಪ್ರತಿಪಾದಿಸುವ ದೇವರು ಎಂಬ ಶಕ್ತಿವಂತ ಇದ್ದಾನೆಯೇ? ಅವನ ರೂಪ ಹೇಗೆ? ಎತ್ತರ ಎಷ್ಟು? ಭಾಷೆ ಯಾವುದು ? ಎಂದು ಪ್ರಶ್ನೆಗಳ ಮಳೆಗರೆದಳು. ಪರಮಹಂಸರು ಮುಗುಳ್ನಗುತ್ತಾ ತಾಯಿ, ನಿನ್ನ ಹೊಟ್ಟೆ ದೊಡ್ಡದಾಗಿ ಕಾಣುತ್ತಿದೆಯಲ್ಲ, ನೀನು ಗರ್ಭಿಣಿಯೇ ? ಎಂದು ಕೇಳಿದರು. ಆಕೆ ಖಂಡಿತ ಹೌದು ಎಂದಳು.

ನಿನ್ನ ಗರ್ಭದಲ್ಲಿರುವ ಶಿಶು ಗಂಡೋ ಹೆಣ್ಣೋ? ಅದರ ರೂಪ ಹೇಗೆ, ನಿನ್ನಂತೆಯೊ ನಿನ್ನ ಗಂಡನಂತೆಯೊ ? ಬಣ್ಣ ಹೇಗಿದೆ? ಅವರು ಪ್ರಶ್ನಿಸಿದರು.

ಅದನ್ನೆಲ್ಲ ಹೇಳಲು ಹೇಗೆ ಸಾಧ್ಯ ? ಗರ್ಭಿಣಿ ಹೌದು ಅಂತ ಒಪ್ಪಬಹುದೇ ವಿನಾ ಇನ್ನೊಂದನ್ನು ವಿವರಿಸಲಾರೆನು ಎಂದಳು ಮಹಿಳೆ.

ತಾಯಿ, ನಾನೂ ನಿನ್ನಂತೆಯೇ ದೇವರು ಇದ್ದಾನೆಂಬುದು ಮನಸ್ಸಿಗೆ ಖಚಿತವಾಗಿ ಗೊತ್ತಿದೆ. ಆದರೆ ಅತ ಗಂಡೋ ಹೆಣ್ಣೋ ರೂಪ ಯಾವುದೆಂಬದು ನಿನ್ನಂತೆಯೇ ನನಗೂ ತಿಳಿಯದು ಎಂದು ಹೇಳಿದರು ಪರಮಹಂಸರು.

ಈ ಅಖಿಲಾಂಡ ಕೋಟಿ ಬ್ರಹ್ಮಾಂಡ ಯಾವಾಗ ಸೃಷ್ಟಿಯಾಯಿತೊ ನಾವರಿಯೆವು. ದೆವರೆಂಬುದಿಲ್ಲ, ವಿಜ್ಞಾನ ಮಾತ್ರ ಇದೆ ಎನ್ನುವ ನಿರೀಶ್ವರವಾದಿಯು ಮೊದಲು ಬೀಜ ಹುಟ್ಟಿತೊ ಮರ ಮೊದಲು ಹುಟ್ಟಿತೊ ಎನ್ನುವ ಜಿಜ್ಞಾಸೆಯನ್ನು ಬಗೆಹರಿಸಲಾರ. ಕಾಲಕಾಲಕ್ಕೆ ಸುರಿಯುವ ಮಳೆ, ತಾನಾಗಿ ಬೆಳೆಕೊಡುವ ಇಳೆ ಇವೆಲ್ಲವೂ ಯಾವುದೋ ಅಗೋಚರ ಶಕ್ತಿಯ ಸೂತ್ರದಂತೆಯೆ ನಡೆಯುವುದಾದರೆ ಆ ಶಕ್ತಿ ಅತಿ ಮಾನುಷ ಎಂಬುದರಲ್ಲಿ ಏನಿದೆ ಸಂದೇಹ ?

"ದೇಹೋ ದೇವಾಲಯ ಪ್ರೋಕ್ತೋ ಜೀವೋ ದೇವಃ ಸದಾಶಿವಃ" ಎಂದಿರುವ ಹಿಂದಿನವರು ಈ ದೇಹವೆಂಬ ದೇವಾಲಯದಲ್ಲಿ ಅಡಕ ಗೊಂಡಿರುವ ಜೀವಾತ್ಮನೇ ಪರಮಾತ್ಮನೆಂದು ಬೋಧಿಸಿದ್ದಾರೆ. ಆದರೆ ಮನಸ್ಸೆನ್ನುವ ಅಂಗಣ ಕಲುಷಿತಯುಕ್ತವಾದಾಗ ಅಲ್ಲಿ ದೇವತ್ವವು ಮಾಯವಾಗಿ ದಾನವತೆ ಬಂದಿತು. ವಿಷಯಾಸಕ್ತಿಯೆಡೆಗೆ ಮನಸ್ಸನ್ನು ಹರಿಸಿದಾಗ ಪಶುತ್ವವೂ ಪ್ರಾಪ್ತವಾದೀತು. ನಿರ್ಗುಣ ನಿರಾಕಾರ ವಾದ ಆತ್ಮತತ್ವದಲ್ಲಿ ಮನಸ್ಸು ಕೇಂದ್ರೀಕೃತವಾದಾಗಲೇ ಆತ್ಮವೆ ದೇವರಾಗಿ ಆತ ದೇವಮಾನವನಾಗ ಬಹುದೆಂಬುದು ಅನುಭಾವಿಕರ ನುಡಿ. ಬಸವಣ್ಣನವರಂತೂ

ಕಲ್ಲುನಾಗರ ಕಂಡರೆ ಹಾಲೆರೆದು ನಿಜದ ನಾಗರವ ಹೊಡೆದು ಕೊಲ್ಲೆಂಬ ಮರುಳರನ್ನು ಕಂಡು ನಗೆಯಾಡಿದ್ದಾರೆ, ಕನಕದಾಸನ ಭಕ್ತಿಗೆ ನಾಯಿಯ ರೂಪದಲ್ಲಿ ಮೈದೋರಿ ರೊಟ್ಟಿಯನ್ನೆತ್ತಿಕೊಂಡು ಓಡಿದ ದೇವರು ಹಸಿದ ಜೀವರಾಶಿಕ್ಷುಧೆಯನ್ನು ತಣಿಸುವುದೇ ನಿಜವಾದ ದೇವತಾರಾಧನೆ ಎಂಬ ನೀತಿಯನ್ನು ತೋರಿಸಿಕೊಟ್ಟಿದ್ದಾರೆ.

ದೇವರು ವೈಕುಂಠವಾಸಿಯೆ? ಕೈಲಾಸವಾಸಿಯೆ? ಹಾಗಿದ್ದರೆ ಅವನಿರುವಲ್ಲಿಗೆ ದೂರವಾದರೂ ಎಷ್ಟು? ಇದು ಪ್ರಶ್ನೆ. ಸಡಗರದಿ ಕಂಭದಿಂದೊಡೆದು ಬಂದ ಹರಿಯು ತಾನು ಎಲ್ಲೆಲ್ಲೂ ಇದ್ದೇನೆಂಬುದನ್ನು ತೋರಿಸಿ ಕೊಟ್ಟ. ಒಂದು ಸಭೆಯಲ್ಲಿ ರಾಜನು ವಿದ್ವಾಂಸರೊಂದಿಗೆ "ದೇವರು ಎಷ್ಟು ದೂರದಲ್ಲಿ ಇದ್ದಾನೆ?" ಎಂದು ಕೇಳಿದ. ಒಬ್ಬೊಬ್ಬರು ಒಂದೊಂದು ವಿಧವಾಗಿ ಉತ್ತರಿಸಿದರು 'ನೂರು ಯೋಜನೆ' ಎಂದರು "ಸಾವಿರ ಹರಿದಾರಿ" ಎಂದರು. 'ಅನಂತ ದೂರ' ಎಂದರು.

ಕಡೆಗೆ ಒಬ್ಬ ಅವಿದ್ಯಾವಂತ ಅಗಸರವನು, "ದೇವರಿಗೂ ಮಾನವರಿಗೂ ಇರುವ ದೂರ ಒಂದು ಕೂಗಳತೆ ಮಾತ್ರ" ಎಂದನಂತೆ. ವಿದ್ವಾಂಸರಿಗೆ ರೇಗಿತು. "ನೀನಾವನೋ ಮಹಾ ತಿಳಿದವನಂತೆ ಮಾತನಾಡುತ್ತಿ? ನಾವೆಲ್ಲ ಶಾಸ್ತ್ರಪುರಾಣಗಳಲ್ಲಿ ಹೇಳಿದ ಲೆಕ್ಕಾಚಾರ ಹೇಗೆಂದು ತಿಳಿದಿದ್ದೇವೆ" ಎಂದರು

ಅಗಸರವನು ವಿನಯದಿಂದ, "ನಾವು ಕೂಗಿದರೆ ಕೇಳಿಸುವಷ್ಟು ಹತ್ತಿರದಲ್ಲಿ ದೇವರು ಇಲ್ಲದಿರುತ್ತಿದ್ದರೆ ಮೃತ್ಯುಂಜಯನು ಮಾರ್ಕಂಡೇಯನು ಕರೆಯುತ್ತಲೇ ಓಡಿ ಬಂದು ಯಮನಿಂದ ರಕ್ಷಿಸಲಿಕ್ಕೆ ಇತ್ತೆ? ಪಾಂಚಾಲಿಯು ಕೂಗಿದ ಕೊಡಲೇ ಅಕ್ಷಯಾಂಬರ ಪಡೆಯಲಿಕ್ಕಿತ್ತೆ? ಮೊಸಳೆಯ ಹಿಡಿತದಲ್ಲಿ ಸಿಲುಕಿದ ಗಜೇಂದ್ರನಿಗೆ ಮೋಕ್ಷ ಲಭಿಸಲಿಕ್ಕಿತ್ತೆ ನೀವೇ ಹೇಳಿ?" ಎಂದು ಕೇಳಿದ. ವಿದ್ವಾಂಸರು ತಲೆ ತಗ್ಗಿಸಿದರು.... ರಾಜನಿಗೆ ಈ ಉತ್ತರದಿಂದ ಖುಷಿಯಾಯಿತು.

ಮಾನವನಾಗಿ ಜನಿಸಿದವನು ಮಾನವ ಎಂಬ ಶಬ್ದದ ಅರ್ಥವನ್ನು ಗ್ರಹಿಸಬೇಕು. ಅಜ್ಞಾನ ವಿಲ್ಲದವನು ಎಂಬುದು ಈ ಶಬ್ದದ ಅರ್ಥ. ದೇವರ ಬಗೆಗೆ ತಿಳಿದುಕೋಳ್ಳುವುದೇ ಜ್ಞಾನದ ಮೊದಲ ಹೆಜ್ಜೆ ತಾನೆ? ಜ್ಞಾನದ ಬೆಳಕು ಕೋರೈಸಿದರೆ ತನ್ನಲ್ಲೇ ಮಾಧವನನ್ನು ಕಾಣಬಹುದು ಎಂದಿದ್ದಾರೆ ತಿಳಿದವರು. ದೈವ ಸಾನಿಧ್ಯ ಲಭಿಸಬೇಕಾದರೆ ಮನಸ್ಸು, ದೃಷ್ಟಿ, ಮಾತು, ಕ್ರಿಯೆ ಮತ್ತು ಶ್ರವಣಗಳನ್ನು ಐದು ದೋಷಗಳನ್ನು ಬಾಧಿಸಲು ಬಳಿಗೆ ಬರದಂತಹ ತಪಸ್ಸನ್ನು ಮಾಡಬೇಕು.

ಸತ್ಯ, ಧರ್ಮ ಶಾಂತಿ, ಪ್ರೇಮಗಳೇ ನಿಜವಾದ ದೇವತಾರಾಧನೆಯ ಅಂಗಗಳು. ಸಂಸಾರ ಪಾಶದಿಂದ ತನ್ನನ್ನೇ ಬಂಧಿಸಿಕೊಂಡ ಮನುಷ್ಯ ಆ ಪಾಶದಿಂದ ತಾನೇ ಬಿಡಿಸಿಕೊಳ್ಳಬಲ್ಲನಾದರೂ ಆ ಕಾರ್ಯ ಮಾಡುವುದಿಲ್ಲ, ಪಾಶವನ್ನು ಇನ್ನಷ್ಟು ಬಿಗಿ

ಗೋಳಿಸುವುದರ ಮೂಲಕ ಅಧರ್ಮ ಕಾರ್ಯದಲ್ಲಿ ತೊಡಗುತ್ತಾನೆ. ಧರ್ಮವನ್ನು ಮೀರು ವಾತನಿಗೆ ದೃಷ್ಟಿ ಚೆನ್ನಾಗಿರುವುದಿಲ್ಲ. ಎಲ್ಲರನ್ನೂ ಸಮಾನ ಭಾವದಿಂದ ಪ್ರೀತಿಸುವ ಹೃದಯ ವಿರುವುದಿಲ್ಲ. ಇನ್ನೊಬ್ಬರಿಗಾಗಿ ತನ್ನ ಸ್ವಾರ್ಥವನ್ನು ಬದಿಗೊತ್ತಬೇಕೆಂಬ ಪ್ರೇಮ ವಿರುವುದಿಲ್ಲ. ಪರಹಿತಕ್ಕಾಗಿ ಏನನ್ನಾದರೂ ತ್ಯಾಗ ಮಾಡಲು ಆತ ಸಿದ್ಧನಾ ಗಿರುವುದಿಲ್ಲ. ಅಂದು ದೇವರನ್ನು ಕಾಣುವುದಕ್ಕೆ ಕುರುಡನಾದರೂ ಧೃತರಾಷ್ಟ್ರನಿಗೆ ಸಾಧ್ಯ ಎನಿಸುವ ದಿವ್ಯದೃಷ್ಟಿ ಸಿಕ್ಕಿದಂತೆ. ಈ ಮಾನವನಿಗೆ ದಿವ್ಯದೃಷ್ಟಿಯ ರೆಪ್ಪೆಗಳು ಮುಚ್ಚಿರುತ್ತವೆ. ತಾನಾಗಿ ತೆರೆದರೆ ದೇವರನ್ನು ಆತ ಕಾಣಬಲ್ಲ.

## ಕನ್ನಡಿಗರ ತಾಯ್ನಾಡು

ಎಸ್. ಆರ್. ಮಾದವ, ಸಿ. 581, ಎಂ.ಜಿ. ರಸ್ತೆ, ಗೌರಿಬಿದನೂರು–561208

ಓ ಕರ್ನಾಟಕ ಮಾತೆ
ನೀನೆ ನಮ್ಮ ಭಾಗ್ಯ ವಿಧಾತೆ
ಕನ್ನಡ ತಾಯಿ ಭುವನೇಶ್ವರಿ
ನಮ್ಮನು ರಕ್ಷಿಸು ಈಶ್ವರಿ

ಹಸಿರುಕ್ಕುವ ಕಾಡುಗಳು
ಬೆಟ್ಟ ಬಂಗಾರದ ಗಣಿಗಳು
ಸಾಗರ ಸುಂದರ ನದಿಗಳು
ರೇಷ್ಮೆಯ ತವರು ಈ ನಾಡು

ಹಾಲಿನ ಹೊಳೆ ಹರಿಯುವುದು ನೋಡು
ಮಾಸ್ತಿ ಗುಂಡಪ್ಪ ಬೇಂದ್ರೆಗಳ ನಾಡು
ಕಾರಂತ ಕುವೆಂಪು ವಿನಾಯಕರ ಬೀಡು

ಹಂಪೆ ಬೇಲೂರು ಹಳೇಬೀಡು
ಐಹೊಳೆ ಬೆಳಗೂಳ ಜಲಪಾತದ ನಾಡು
ಇದು ಕನ್ನಡಿಗರ ಸುಂದರ ತಾಯ್ನಾಡು

# ಬಲಿಷ್ಠ ಕರ್ನಾಟಕಕ್ಕೆ ಭದ್ರ ಬುನಾದಿ

ರಾಜ್ಯೋತ್ಸವ ದಿನಾಚರಣೆ, ಹಳೆಯ ಮೈಸೂರು ರಾಜ್ಯ ಕರ್ನಾಟಕ ಎಂದು ನಾಮಾಂಕಿತಗೊಂಡು, ಅಪಾರ ಪ್ರಗತಿಯನ್ನು ಪ್ರತಿಬಿಂಬಿಸುವ ಸುದಿನ. ಶತಮಾನಗಳಿಂದ ಅನೇಕ ಧರ್ಮಗಳು ಮತ್ತು ವಿಭಿನ್ನ ಸಂಸ್ಕೃತಿಗಳಿಗೆ ಆಸರೆ ನೀಡಿರುವ ನಾಡಿದು. ಕಲೆಯ ಬೀಡು.

ಈ ಸುಂದರನಾಡಿನ ನವ ನಿರ್ಮಾಣಕ್ಕೆ ಪ್ರೇರಣೆ ನೀಡಿದ್ದ ಆದರ್ಶಗಳನ್ನು ನೆನಪಿಸಿಕೊಂಡು ಪರಿಪಾಲಿಸುವ ಪಣವನ್ನು ನಾವೆಲ್ಲರೂ ಸ್ವೀಕರಿಸಬೇಕಾದ ಸಮಯ ಇದಾಗಿದೆ. ನಮ್ಮ ಹಿರಿಯರ ಪರಂಪರೆಯನ್ನು ಕಾಪಾಡಿ, ನಾಡಿನ ತರುಣರ ಆಶೋತ್ತರಗಳನ್ನು ಈಡೇರಿಸುವ ಸಮಯ ಮರುಕಳಿಸಿದೆ.

ಸ್ವಾತಂತ್ರ್ಯನಂತರ ಒಂದು ನವರಾಜ್ಯವಾಗಿ ಅಂಕುರಗೊಂಡ ಕರ್ನಾಟಕ ಇಂದು ಸಮೃದ್ಧವಾಗಿ ಬೆಳೆದಿದೆ ಇಲ್ಲಿ ಪ್ರಬುದ್ಧ ಪ್ರಜಾಸತ್ತಾತ್ಮಕ ವ್ಯವಸ್ಥೆಯು ಆಳವಾಗಿ ಬೇರೂರಿ ಶ್ರೀಸಾಮಾನ್ಯನಿಗೆ ಅಧಿಕಾರದ ಫಲವನ್ನು ದಕ್ಕಿಸಿಕೊಟ್ಟಿದೆ. ಸ್ವಚ್ಛ ಮತ್ತು ಮುಚ್ಚುಮರೆಯಿಲ್ಲದ ಆಡಳಿತವನ್ನು ಒದಗಿಸಿ ಜನರ ನಂಬಿಕೆಗಳಿಗೆ ಇಂಬು ನೀಡಿದೆ. ಆಡಳಿತದಲ್ಲಿ ದಕ್ಷತೆ ಮತ್ತು ನಿಸ್ಪೃಹ ಸೇವೆಯನ್ನು ತಂದಿದೆ.

ಬನ್ನಿರಿ, ರಾಜ್ಯೋತ್ಸವ ದಿನಾಚರಣೆಯ ಈ ಶುಭ ಸಂದರ್ಭದಲ್ಲಿ ಬಲಿಷ್ಠ ಮತ್ತು ಸಂಘಟಿತ ಕರ್ನಾಟಕದ ನಿರ್ಮಾಣಕ್ಕಾಗಿ ಬದ್ಧರಾಗೋಣ, ಇತರ ಆತ್ಮವಿಶ್ವಾಸ ಮತ್ತು ಆತ್ಮಗೌರವದೊಂದಿಗೆ ಬಾಳುವ ನಾಡನ್ನು ಕಟ್ಟೋಣ. 21 ನೇಯ ಶತಮಾನದಲ್ಲಿ ತನ್ನ ಖ್ಯಾತಿಯ ಕಂಪನ್ನು ಎಲ್ಲೆಡೆ ಹರಡಲು ರಾಜ್ಯಕ್ಕೆ ನಮ್ಮ ಪರಿಶ್ರಮದ ಧಾರೆಯನ್ನು ಎರೆಯೋಣ.

1993-94 ನೆಯ ಸಾಲಿಗಾಗಿ ಆಯೋಜನಾ ಗಾತ್ರವನ್ನು 3025 ಕೋಟಿ ರೂಗಳಿಗೆ ಹೆಚ್ಚಿಸಲಾಗಿದ್ದು, ಇದು ಕಳೆದ ವರ್ಷದ ಬಂಡವಾಳಕ್ಕಿಂತ ಶೇ. 58ರಷ್ಟು ಹೆಚ್ಚಾಗಿದೆ.

ಮುಂದಿನ 4 ವರ್ಷಗಳಲ್ಲಿ ವಿದ್ಯುತ್ ಕ್ಷೇತ್ರಕ್ಕಾಗಿ 16 ಸಾವಿರ ಕೋಟಿ ರೂಗಳ ಪ್ರಾರಂಭಿತ ಬಂಡವಾಳ 3000 ಮೆಗವಾಟ್‌ಗಳ ಪ್ರಸ್ತುತ ಸ್ಥಾಪಿತ ಸಾಮರ್ಥ್ಯವನ್ನು 7000 ಮೆಗವಾಟ್‌ಗಳಿಗೆ ಹೆಚ್ಚಿಸುವ ಕ್ರಮ.

ಆರ್ಥವ್ಯವಸ್ಥೆಯನ್ನು ವೈವಿಧ್ಯಗೊಳಿಸಿ ಕೃಷಿಕರಿಗೆ ಇತರ ಕ್ಷೇತ್ರಗಳಲ್ಲಿ ಕಸುಬುಗಾಗಿ ಪ್ರೋತ್ಸಾಹ,

ಕೈಗಾರಿಕಾ ಬಂಡವಾಳಕ್ಕೆ ಪೂರಕವಾದ ಕೈಗಾರಿಕಾ ಧೋರಣೆ ಮತ್ತು ಪ್ರೋತ್ಸಾಹಕ ಕ್ರಮಗಳು.

ಕೈಗಾರಿಕಾ ಕ್ಷೇತ್ರದಲ್ಲಿ ಈಗಾಗಲೇ 24 ಸಾವಿರ ಕೋಟಿ ರೂಪಾಯಿಗಳನ್ನು ತೊಡಗಿಸಿದ್ದು.

ಶತಮಾನದ ಅಂತ್ಯದ ವೇಳೆಗೆ ಇದು 66 ಸಾವಿರಕೋಟಿ ರೂ. ಗಳಿಗೆ ಹೆಚ್ಚಲಿದೆ 26 ಲಕ್ಷಕ್ಕೂ ಹೆಚ್ಚು ಮಂದಿಗೆ ಉದ್ಯೋಗಾವಕಾಶಗಳು

ಪ್ರಜಾಸತಾತ್ಮಕ ವಿಕೇಂದ್ರಿಕರಣಕ್ಕಾಗಿ ಪಂಚಾಯತ್‌ರಾಜ್ ಶಾಸನವನ್ನು ಅನುಷ್ಠಾನಕ್ಕೆ ತಂದು ಗ್ರಾಮ ಪಂಚಾಯಿತಿಗಳಿಗೆ ಹೆಚ್ಚಿನ ಅಧಿಕಾರ.

ಆಶ್ರಯ ಯೋಜನೆಯನ್ವಯ ಡಿಶೆಂಬರ್ 93 ರ ಅಂತ್ಯದ ಒಳಗೆ 50 ಸಾವಿರ ಮನೆಗಳ ನಿರ್ಮಾಣ. ಮುಂದಿನ 7 ವರ್ಷಗಳಲ್ಲಿ ಕೊಳಚೆ ಪ್ರದೇಶದ ನಿವಾಸಿಗಳಿಗೆ ಬೃಹತ್ ಗೃಹ ನಿರ್ಮಾಣ ಯೋಜನೆ.

2 ಸಾವಿರ ಇಸವಿಯ ವೇಳೆಗೆ ಪ್ರತಿ ತರಗತಿಗೆ ಒಬ್ಬ ಶಿಕ್ಷಕರನ್ನು ನೇಮಿಸುವ ಕಾರ್ಯಕ್ರಮ.

1993 ನೇಯ ವರ್ಷವನ್ನು ಕನ್ನಡ ಜಾಗೃತಿ ವರ್ಷವಾಗಿ ಘೋಷಿಸಿ ಅಧಿಕಾರ ಮಟ್ಟದಲ್ಲಿ ಕನ್ನಡಕ್ಕೆ ಆಧ್ಯತೆ.

ಮುಂದಿನ 2 ವರ್ಷಗಳಲ್ಲಿ ರಾಜ್ಯದಲ್ಲಿ ಸಂಪೂರ್ಣ ಸಾಕ್ಷರತೆಯ ಸಾಧನೆ.

ಒಗ್ಗೂಡಿ ಬೆಳೆಸೋಣ

ಕರ್ನಾಟಕ ವಾರ್ತೆ

ವಾರ್ತಾ ಮತ್ತು ಪ್ರಚಾರ ಇಲಾಖೆ

# ಕನ್ನಡ ಶಕ್ತಿಪೀಠ ವಿದ್ಯಾವರ್ಧಕ ಸಂಘ

-ಆರ್. ಜಿ. ಶ್ಯಾನಭಾಗ ಹೊನ್ನಾವರ ಶರಾವತಿ ಪ್ರೌಢಶಾಲೆ, ಹೊಸಾಡ, ಹೊನ್ನಾವರ, (ಪ.ಕ.)

ಕನ್ನಡಾಭಿಮಾನ ಶೂನ್ಯಾವಸ್ಥೆಯಲ್ಲಿ ಇದ್ದ ಕಾಲವದು. ಉತ್ತರ ಕರ್ನಾಟಕವು ಬಹುಸಂಖ್ಯಾತ ಮರಾಠಿಗರಿಂದ ನೆಲೆಯೂರಿತ್ತು. ಈ ಭಾಗ ದಕ್ಷಿಣ ಮರಾಠಿ ದೇಶವೆಂದೂ ನಾಮಕರಣ ಗೊಂಡಿತ್ತು. ಮರಾಠಿ ಮಾತನಾಡುವುದೆಂದರೆ ಈ ಭಾಗದ ಜನತೆಗೆ ಗೌರವದ ಲಾಂಛನವಾಗಿತ್ತು. ಕನ್ನಡದ ಸಂಸ್ಕೃತಿಯು ನೆಲದಲ್ಲಿ ಕನ್ನಡವು ತಬ್ಬಲಿಯಾಗಿತ್ತು. ಕನ್ನಡಿಗರು ತಮ್ಮ ಅಸ್ತಿತ್ವವನ್ನು ಗುರುತಿಸಲಾಗದಷ್ಟು ಸಂಕಷ್ಟ ಸ್ಥಿತಿಯಲ್ಲಿದ್ದರು.

**ಕನ್ನಡದ ಕಂಪು :-** 1890ರ ಇಂಥ ವಿಲಕ್ಷಣ ಸನ್ನಿವೇಶದಲ್ಲಿ ಕನ್ನಡದ ಗಂಡುಮೆಟ್ಟಿನ ನೆಲವಾದ ಧಾರವಾಡದಲ್ಲಿ ಕನ್ನಡ ಭಾಷೆ ಹಾಗೂ ಸಂಸ್ಕೃತಿಯ ಕುರಿತಾಗಿ ಅಭಿಮಾನ ಮೂಡಲಾರಂಭಿಸಿತು. ವಿದ್ಯಾವರ್ಧಕ ಸಂಘ ಇದಕ್ಕಾಗಿ ದೀಕ್ಷೆಯನ್ನು ತೊಟ್ಟಿತು. ರಾಮಚಂದ್ರ ಹನುಮಂತ ದೇಶಪಾಂಡೆ ಈ ಸಂಘದ ನಿರ್ಮಾತೃ. ಮುಂಬಯಿ ವಿಶ್ವವಿದ್ಯಾಲಯದಿಂದ ಕನ್ನಡ ಸ್ನಾತಕೋತ್ತರ ಪದವಿ ಪಡೆದ ಮೊದಲ ಕನ್ನಡಿಗರು ಇವರಾಗಿದ್ದಾರೆ. ಆ ಪ್ರದೇಶದ ಆಂಗ್ಲ ಶಿಕ್ಷಣಾಧಿಕಾರಿ ಯಾಗಿರುವ ರಸ್ಸೆಲ್‌ರು ಶ್ರೀ ದೇಶಪಾಂಡೆ ಇವರಿಗೆ ಕನ್ನಡಕ್ಕಾಗಿ ಕಳಕಳಿಯನ್ನು ಮೂಡಿಸಿ ಸಂಘ ಸ್ಥಾಪನೆಗಾಗಿ ಕಾರಣಭೂತರಾದರು. ಕನ್ನಡ ಅಳಿಯುತ್ತಿರುವ ಕಾಲದಲ್ಲಿ ಕನ್ನಡದ ಉಳಿವಿಗಾಗಿ ವಿದ್ಯಾವರ್ಧಕ ಸಂಘ ಶ್ರೀಗಂಧದಂತೆ ತನ್ನನ್ನು ತೇದಿಕೊಳ್ಳಲಾರಂಭಿಸಿತು. ಧರ್ಮಯುದ್ಧ ಹೂಡಿ ವಿಜಯಸಾಧಿಸಿತು. ಕನ್ನಡ ಸಾಹಿತ್ಯ ವಿಕಸನಕ್ಕಾಗಿಯೇ ಮುಡುಪಾಗಿರುವ ಸಂಸ್ಥೆ ಬರವಣಿಗೆ ಹಾಗೂ ಪುಸ್ತಕ ಪ್ರಕಟಣೆಗಾಗಿ ಕನ್ನಡಿಗರಿಗೆ ಉತ್ತೇಜನ ನೀಡಿತು. ಶ್ರೀ ದೋಂಡೋ ನರಸಿಂಹ ಮುಳಬಾಗಲರು ಬರೆದಿರುವ "ಉತ್ತರ ರಾಮಚರಿತ್ರೆ" ಸಂಘದಿಂದ ಮೊದಲು ಬೆಳಕು ಕಂಡ ಕೃತಿಯಾಗಿದೆ. ನಾಡಿನ ಖ್ಯಾತ ಸಾಹಿತಿಗಳಾದ ಬೆಟಗೇರಿ ಕೃಷ್ಣಶರ್ಮಾ, ಶಂ.ಬಾ. ಜೋಶಿ, ಪಿ.ಡಿ. ಕರಮಕರ ಮೊದಲಾದವರ ಕೃತಿಗಳನ್ನು ಪ್ರಕಟಿಸಿ ಸಾಹಿತ್ಯ ಉಪಾಸನೆಯನ್ನು ಗೈದಿದೆ. ಪುಸ್ತಕ ಬರವಣಿಗೆಗೆ ಪ್ರಶಸ್ತಿಯನ್ನಿರಿಸಿ ಸುಮಾರು 423 ಕೃತಿಗಳಿಗೆ 40ವರ್ಷ ಅವಧಿಯಲ್ಲಿ ಪ್ರಶಸ್ತಿಯನ್ನು ನೀಡಿ ಪುರಸ್ಕರಿಸಿದೆ. ಪ್ರಬುದ್ಧನಯನ ಎಂಬ ಕಾದಂಬರಿಯನ್ನು ತಾನು ಬರೆಯಲು ಸಂಘ ಇರಿಸಿರುವ ಪ್ರಶಸ್ತಿಯೇ ಕಾರಣವೆಂದು ಶ್ರೀಗಳಗನಾಥರು ಕಾದಂಬರಿಯ ಮುನ್ನುಡಿಯಲ್ಲಿ ಸ್ಮರಿಸಿ ಸಂಘವನ್ನು ಅಭಿನಂದಿಸಿರುವರು. ಸಂಘದ ಪ್ರಶಸ್ತಿ ಕನ್ನಡಿಗರ ಸಾಹಿತ್ಯ ಪ್ರತಿಭೆಯನ್ನು ಬೆಳಗಿಸಿತು.

ಗ್ರಂಥಸ್ಥ ಭಾಷೆಗೆ ಏಕರೂಪತೆಯನ್ನು ಹರಳುಗಟ್ಟಿಸಲು ಸಂಘ 1907 ಮತ್ತು 1908ರಲ್ಲಿ ಬರಹಗಾರರ ಸಮ್ಮೇಳನ ನಡೆಸಿತು. ಸಮ್ಮೇಳನಗಳ ಸ್ಫೂರ್ತಿಯ ಸೆಲೆಯಾಗಿ ಬೆಂಗಳೂರಿನಲ್ಲಿ 1915 ರಲ್ಲಿ ಕನ್ನಡ ಸಾಹಿತ್ಯ ಪರಿಷತ್ ಪ್ರಸವಿಸಿತು. ಕನ್ನಡಿಗರಲ್ಲಿ ವಾಚಕ ಪ್ರವೃತ್ತಿಯನ್ನು ಬೆಳೆಸಲು ಗ್ರಂಥಾಲಯನ್ನು ಸ್ಥಾಪಿಸಿತು. ನಗರದ ಗಣ್ಯರಾದ ಎಸ್. ಎಸ್. ಮಾಲವಾಡ ಮತ್ತು ಕೆ. ವಿ. ದೀಕ್ಷಿತ ತಮ್ಮಲ್ಲಿರುವ ಗ್ರಂಥಗಳನ್ನು ಸಂಘದ ಗ್ರಂಥಾಲಯಕ್ಕೆ ನೀಡಿ ಶ್ರೀಮಂತಗೊಳಿಸಿದರು. ಮುಂಬಯಿ ಸರಕಾರದಿಂದ ಮಾನ್ಯತೆಯನ್ನು ಪಡೆದ ಗ್ರಂಥಾಲಯ ಧಾರವಾಡ ಕನ್ನಡ ಬಾಷಿಕರ ಕೇಂದ್ರ ಸ್ಥಾನವೆಂಬ ಕಾರಣದಿಂದ ವಿಧ್ಯಾವರ್ಧಕ ಸಂಘದಲ್ಲಿ ನೆಲೆಕಂಡಿತು.

**ಕನ್ನಡದ ಮೇಲೆ ಕಣ್ಗಾವಲು :–** ಸಾಂಸ್ಕೃತಿಕ ಚಳುವಳಿಗಾಗಿ ಶೈಕ್ಷಣಿಕ ಪ್ರಸಾರ ಕಾರ್ಯಕ್ರಮವನ್ನು ಹಮ್ಮಿಕೊಂಡಿತು. ಕನ್ನಡ ಪದವಿ ಶಿಕ್ಷಣ ಆರಂಭಕ್ಕಾಗಿ ಮುಂಬಯಿ ವಿಶ್ವವಿದ್ಯಾಲಯವನ್ನು ಒತ್ತಾಯಿಸಿತು. ಕನ್ನಡ ಪ್ರೌಢಿಮೆಯನ್ನು ಗುರುತಿಸಲು ಪರೀಕ್ಷಾವ್ಯವಸ್ಥೆಯನ್ನು ಆರಂಭಿಸಿ ಉತ್ತೀರ್ಣರಾದವರಿಗೆ ಸರ್ಟಿಫಿಕೆಟ್ ಗಳನ್ನು ನೀಡಿ ಗೌರವಿಸಿತು. **ಕರ್ನಾಟಕ ವಿಶ್ವವಿದ್ಯಾಲಯ ಹಾಗೂ ಬೆಳಗಾವಿಯ ಲಿಂಗರಾಜ ಕಾಲೇಜ್ ಸ್ಥಾಪನೆಯಾದುದು ಸಂಘದ ಪ್ರಯತ್ನದಿಂದಲೇ ಆಗಿರುವುದು**. ಶೈಕ್ಷಣಿಕ ಸಂಸ್ಥೆಗಳಲ್ಲಿ ಕನ್ನಡ ಮಾಧ್ಯಮವಾಗಬೇಕು. ಹಾಗೂ ಆಡಳಿತವೆಲ್ಲ ಹಂತಗಳಲ್ಲಿ ಕನ್ನಡವು ಜಾರಿಗೆ ಬರುತ್ತಿರಬೇಕೆಂದು ವಿದ್ಯಾವರ್ಧಕ ಸಂಘನಿತ್ಯನಿರಂತರ ಕಣ್ಗಾವಲನ್ನು ಇರಿಸುತ್ತಿದೆ. ಕನ್ನಡ ಅಳಿಯದಂತೆ ಉಳಿಸಲು ಕಾವಲಾಗಿ ನಿಂತ ಸಂಸ್ಥೆ ಇದಾಗಿದೆ.

ಮರಾಠಿ ಮಯವಾದ ಕಾರವಾರ, ಬೆಳಗಾಂವಿ, ಬಿಜಾಪುರಗಳಲ್ಲಿ ಜನರನ್ನು ಕನ್ನಡ ಪರವಾಗಿರಿಸಲು ಸಂಘ ಶಾಖೆಗಳನ್ನು ಸ್ಥಾಪಿಸಿ ತನ್ನ ಚಟುವಟಿಕೆಗಳನ್ನು ವಿಸ್ತೃತಗೊಳಿಸಿತ್ತು. 1917 ರಲ್ಲೇ ವಿವಿಧ ಭಾಷಾ ಪ್ರಾಂತಗಳಲ್ಲಿ ಹರಿದು ಹಂಚಿ ಹೋಗಿರುವ ಕನ್ನಡ ನಾಡು ಏಕ ಲಾಂಛನದಡಿಯಲ್ಲಿ ಏಕತ್ವಗೊಳಿಬೇಕೆಂದು ಸಂಘ ಕನವರಿಸಿತ್ತು. 1956 ರಲ್ಲಿ ಸಂಘದ ಕನಸು ನನಸಾಯಿತು. ಕರ್ನಾಟಕದ ಏಕೀಕರಣಕ್ಕಾಗಿ ಸಂಘ ರಣಕಹಳೆಯನ್ನು ಮೊಳಗಿಸಿರುವುದನ್ನು ಯಾರೂ ಮರೆಯುವಂತಿಲ್ಲ. ಕರ್ನಾಟಕದ ಏಕೀಕರಣದ ಇತಿಹಾಸದಲ್ಲಿ ಸಂಘ ಪ್ರಾಥಃ ಸ್ಮರಣೀಯ. ಗತಕಾಲದ ಕನ್ನಡ ನಾಡಿನ ವೈಭವವನ್ನು ನೆನಪಿಸಿ ಕೊಡುತ್ತಿರಲು ದಸರೆಯನ್ನು ನಾಡಹಬ್ಬವನ್ನಾಗಿ ಆಚರಿಸುವ ಸತ್ಸಂಪ್ರದಾಯ ಹಾಕಿರುವ ಹೆಗ್ಗಳಿಕೆ ವಿದ್ಯಾವರ್ಧಕ ಸಂಘಕ್ಕೆ ಸಲ್ಲುತ್ತದೆ.

**ನಿಂಚಿ ನಾಯುವಾದ ಪತ್ರಿಕೆ:-**

ಮರಾಠಿ ಹೇರಿಕೆ ನಿಲ್ಲುವಂತಾಗಲು ಸಂಘ ತನ್ನ ಕಾರ್ಯಕಲಾಪಗಳಲ್ಲಿ ಕನ್ನಡ ಒಂದನ್ನೇ ಬಳಕೆಯಾಗಬೇಕೆಂಬ ತೀರ್ಮಾನವನ್ನು ಕೈಗೊಂಡಿತು. ಧಾರವಾಡ ಆಕಾಶವಾಣಿ ಕೇಂದ್ರದ ಕಾರ್ಯಕ್ರಮಗಳು ಕನ್ನಡ ಪರವಾಗಿರಿಸಲು ನಿಲಯದ ನಿರ್ದೇಶಕರಿಗೆ ನಿರ್ದೇಶನವನ್ನು ನೀಡುತ್ತಿತ್ತು. ನಿಲಯದ ಮರಾಠಿಮಯ ಕಾರ್ಯಕ್ರಮಗಳೆಲ್ಲವೂ ಕನ್ನಡ ಮಯವಾಗಲಾರಂಭಿಸಿದವು.

ಕನ್ನಡ ಸಾಹಿತ್ಯ ಪ್ರಸಾರಕ್ಕಾಗಿ ವಿದ್ಯಾವರ್ಧಕ ಸಂಘ 1896 ರಲ್ಲಿ ವಾಗ್ಭೂಷಣವೆಂಬ ಮಾಸ ಪತ್ರಿಕೆಯನ್ನು ಪ್ರಕಟಿಸಿತು. ಕನ್ನಡದ ಕುಲ ಪುರೋಹಿತ ಆಲೂರ ವೆಂಕಟರಾಯರು ಕೆಲ ಕಾಲ ಇದರ ಸಂಪಾದಕರಾಗಿದ್ದರು. ಪತ್ರಿಕೋದ್ಯಮದಲ್ಲಿ ನಂದಾದೀಪವಾಗಿ ಉರಿಯ ಬೇಕಿರುವ ಪತ್ರಿಕೆ ಆರ್ಥಿಕ ಮುಗ್ಗಟ್ಟಿನಿಂದಾಗಿ ನಂದಿ ಹೋಯಿತು. 1932 ರಲ್ಲಿ ಪತ್ರಿಕೆ ತನ್ನ ಕೊನೆಯುಸಿರೆಳೆಯಿತು. ಸಂಘದ ಶತಮಾನೋತ್ಸವದ ನೆನಪಿನ ಸಂಚಿಕೆಯಾಗಿ ಉಳಿಯುವಂತಾಗಲು ಈ ಪತ್ರಿಕೆಗೆ ಪುನರ್ ಜೀವದಾನವನ್ನು ನೀಡಲು ಸಂಘ ಚಿಂತಿಸುತ್ತಿದೆ.

ಡಾ|| ಧಾರವಾಡಕರ, ಎನ್ಕೆ ಕುಲಕರ್ಣಿ, ಡಾ|| ಆರ್. ಸಿ. ಹಿರೇಮಠ, ಡಾ|| ಶಂ. ಬಾ. ಜೋಷಿ ಡಾ|| ದ. ರಾ ಬೇಂದ್ರೆ ಮತ್ತು ಬೆಟಗೇರಿ ಕೃಷ್ಣಶರ್ಮ ಸಂಘದ ಸುತ್ತ ಚಲನಾಶೀಲರಾಗಿ ದುಡಿದ ಮಹನೀಯರು.

ಖ್ಯಾತ ಭಾರತೀಯ ಲೇಖಕ ಮುಲ್ಕರಾಜ ಆನಂದರು ವಿದ್ಯಾವರ್ಧಕ ಸಂಘ ಬೆಳಗಿಸಿದ ಜ್ಯೋತಿ ಕರ್ನಾಟಕದ ಹಲವಡೆಗಳಲ್ಲಿ ಬೆಳಕನ್ನು ಚೆಲ್ಲಿರುವುದಾಗಿ ಸಂಘದ ಕುರಿತಾಗಿ ಘನ ಶ್ಲಾಘನೆಯನ್ನು ಮಾಡಿರುವರು. ಜಿಗಲರ, ರೈಸ, ಕಿಟ್ಟೆಲ್ ಮತ್ತು ಫ್ಲೀಟ ಮೊದಲಾದ ಆಂಗ್ಲ ಅಧಿಕಾರಿಗಳು ಸಂಘದ ಚಟುವಟಿಕೆಗಳಲ್ಲಿ ತೀವ್ರ ಆಸಕ್ತಿಯನ್ನು ತೋರಿಸುತ್ತಿದ್ದರು. ಇವರೆಲ್ಲ ಸಂಘದ ಗೌರವ ಸದಸ್ಯತ್ವಕ್ಕೆ ಪಾತ್ರರಾಗಿದ್ದರು.

**ಕನ್ನಡಾಂಬೆ ದೇಗುಲ:-**

ಧಾರವಾಡ ನಗರದ ಹೃದಯ ತಾಣದಲ್ಲಿ ನೆಲೆಸಿರುವ ವಿದ್ಯಾವರ್ಧಕ ಸಂಘ ನಗರದ ಸೌಂದರ್ಯಕ್ಕೆ ರಾಜವೈಭವದ ಶೈಲಿಯಲ್ಲಿ ನಿಂತಿರುವ ತಿಲಕಪ್ರಾಯ ಕಟ್ಟಡ ಕಟ್ಟಡದ ನಿರ್ಮಾಣಕ್ಕೆ 1905 ರಲ್ಲಿ ಮೈಸೂರು ಮಹಾರಾಜರು 6000 ರೂಪಾಯಿ ಸಹಾಯ ಧನವನ್ನು ನೀಡಿದ್ದರು. ಬಾದಾಮಿ ಕಲ್ಲು ಸುಟ್ಟ ಇಟ್ಟಂಗಿಗಳಿಂದ ಕಟ್ಟಲ್ಪಟ್ಟ ಕಟ್ಟಡ

ಅಂದಿನ ಮೈಸೂರ ಮಹಾರಾಜರಾದ ಚಾಮರಾಜರ ಹೆಸರಿನಿಂದ **ಚಾಮರಾಜ ಮಂದಿರ ಎಂದು ನಾಮಕರಣಗೊಂಡಿತು** ಕಟ್ಟಡಕ್ಕೆ ವಾಣಿಜ್ಯ ಸಂಕೀರ್ಣ ಇದೆ. ಇದರಿಂದ ಬರುವ ಬಾಡಿಗೆ ಮತ್ತು ಸರಕಾರದ ಅನುದಾನಗಳಿಂದ ಸಂಘ ತನ್ನ ಚಟುವಟಿಕೆಗಳನ್ನು ನಡೆಸುತ್ತಿದೆ ಶ್ರೀ ಶ್ಯಾಮರಾವ ವಿಠಲ ಕೈಕಿಣಿಯವರು ಸಂಘದ ಪ್ರಪ್ರಥಮ ಅಧ್ಯಕ್ಷ ಹಾಗೂ ಶ್ರೀ ರಾಮಚಂದ್ರ ಹನುಮಂತ ದೇಶಪಾಂಡೆಯವರು ಮೊದಲ ಕಾರ್ಯದರ್ಶಿ ಯಾಗಿ ಸಲ್ಲಿಸಿರುವ ಸೇವೆ ಮನನೀಯ. ಕನ್ನಡ ಕಾವಲು ಸಮಿತಿಯ ಮಾಜಿ ಅಧ್ಯಕ್ಷ ರಾದ ಪಾಟೀಲ ಪುಟ್ಟಪ್ಪ ನವರು ಕಳೆದ ಇಪ್ಪತ್ತಮೂರು ವರ್ಷಗಳಿಂದ ಸಂಘದ ಅಧ್ಯಕ್ಷರಾಗಿ ಚುಕ್ಕಾಣಿ ಹಿಡಿದಿರುವುದು ಇನ್ನೂ ಪ್ರಶಂಸನೀಯ ದಿಕ್ಕು ತಪ್ಪುತ್ತಿರುವ ಕನ್ನಡ ಸಂಸ್ಕೃತಿಗೆ ದೀಪಸ್ತಂಬವಾಗಿರಲು ಸಂಘದ ಅಧ್ಯಕ್ಷೀಯ ಪೀಠವನ್ನು ಅಲಂಕ-ರಿಸಿದಂತಾಗಿದೆ. **ಸಂಘ ಜುಲೈ 7-1990ರಂದು ಶತಾಯುಷಿಯಾಗಿದೆ.** ಕರ್ನಾಟಕದ ಮಾಜಿ ಮುಖ್ಯಮಂತ್ರಿ ವೀರೇಂದ್ರ ಪಾಟೀಲರು ನಾಂದಿಯನ್ನು ಬೆಳಗಿಸಿ ಶತಮಾನೋ ತ್ಸವದ ಆಚರಣೆಗೆ ಶುಭವನ್ನು ಕೋರಿದ್ದಾರೆ.

ಕನ್ನಡಾಂಬೆಯ ದೇಗುಲ ವಿದ್ಯಾವರ್ಧಕ ಸಂಘ ಕೇವಲ ಕಲ್ಲಿನ ಕಟ್ಟಡ ಮಾತ್ರ ವಲ್ಲ. ಕನ್ನಡ ಸಂಸ್ಕೃತಿಯ ಜಾಗೃತಪೀಠ. ಇದು ಒಂದು ಶತಕದ ಕನ್ನಡ ನಾಡ ಇತಿಹಾಸವನ್ನು ಸಾರಲು ನಿಂತಿರುವ ಜೀವಂತ ಸಾಕ್ಷಿ ಸ್ಮಾರಕ. ಇದರಲ್ಲಿ ಸಂಗ್ರಹಿತ ವಾಗಿರುವ ಪ್ರಾಚೀನ ಕಾಗದ ಪತ್ರ, ಪತ್ರಿಕೆ, ಹಾಗೂ ಫೋಟೋಗಳು ಇತಿಹಾಸ ರೂಪಿಸಲು ಸಾಕ್ಷ್ಯಾಧಾರಗಳಾಗಿವೆ. ಕನ್ನಡ ಬಾವುಟ ಎತ್ತಿ ಹಾರಿಸಿದ ಕೀರ್ತಿಗೆ ಕಟ್ಟಡ ನಿಂತಂತಿದೆ. ಕನ್ನಡ ಸಂಶೋಧನೆ ಹಾಗೂ ಅಭಿವೃದ್ಧಿ ಪರವಾಗಿಯೇ ಸಂಸ್ಥೆ ಮೀಸಲಿದೆ.

ಸಂಘದ ಚೇತನದಿಂದಲೇ ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಇತಿಹಾಸ ಸಂಶೋಧಕ ಮಂಡಳಿ, ಕರ್ನಾಟಕ ಕಾಲೇಜು ವಿಶ್ವವಿದ್ಯಾಲಯ ಆಕಾಶವಾಣಿ ನಿಲಯ, ಹಾಗೂ ಪ್ರಕಾಶನ ಸಂಸ್ಥೆಗಳು ತಲೆ ಎತ್ತಿ ಘನ ಸಂಸ್ಥೆಗಳಾಗಿ ಮೆರೆಯುವ ಕಾಲದಲ್ಲಿ ಮಾತೃ ಸಂಸ್ಥೆಯಾಗಿರುವ ಕರ್ನಾಟಕ ವಿಧ್ಯಾವರ್ಧಕ ಸಂಘ ಕೃಶವಾಗಿ ತಬ್ಬಲಿಯಾಗಿ ನಿಂತಿದೆ. ಸಂಘದ ಆತ್ಮ ಅಜ್ಞಾತವಾಸ ಅನುಭವಿಸುತ್ತಿರುವ ಕಾಲದಲ್ಲಿ ಸಾಹಿತ್ಯಾ-ಸಕ್ತರು ವಿದ್ಯಾವರ್ಧಕ ಸಂಘಕ್ಕಾಗಿ ಶಕ್ತಿವರ್ಧಕರಾಗಿ ನಿಲ್ಲಬೇಕಾಗಿದೆ. ರೋಗಗ್ರ-ಸ್ಥವಾಗಿ ಕೃಶವಾಗುತ್ತಿರುವ ಸಂಘಕ್ಕೆ ಕನ್ನಡಾಭಿಮಾನಿಗಳು ಚಿಕಿತ್ಸೆ ನೀಡಲಿ ●



# ಬಸವತತ್ತ್ವ ರತ್ನಾಕರ–21

## ( ವಚನ ಕಾವ್ಯ ಸುಧಾಸಾಗರ )

ಶ್ರೀ ಪೋಟಗಿ ಮಲ್ಲಿಕಾರ್ಜುನ "ಕನ್ನಡಕವಿಕಾಳಿದಾಸ" ಅಥಣಿ-591304 (ಬೆಳಗಾವಿ ಜಿಲ್ಲೆ.)

### ಭಕ್ತದೇಹಿಕದೇವ (190)

"ಸಗುಣ-ನಿರ್ಗುಣನು ನೀನೆ ಅಯ್ಯಾ
ಸಾಕಾರ-ನಿರಾಕಾರನು ನೀನೆ ಅಯ್ಯಾ.
ವ್ಯಕ್ತ-ಅವ್ಯಕ್ತನು ನೀನೆ ಅಯ್ಯಾ.
ವಿಶ್ವವ್ಯಾಪಿ-ವಿಶ್ವಾತೀತನು ನೀನೆ ಅಯ್ಯಾ.
ಸರ್ವಾಂತರ್ಯಾಮಿ-ಸರ್ವೋತ್ತೀರ್ಣನು ನೀನೆ ಅಯ್ಯಾ.
ಸಚ್ಚಿದಾನಂದ ಮೂರ್ತಿ ಶ್ರೀಶೈಲ ಮಲ್ಲಿಕಾರ್ಜುನ
ಭಕ್ತದೇಹಿಕ ದೇವ ನೀನೆಯಾಗಿರ್ದ ಕಾರಣ
ಭಕ್ತ ಗಂಗೆಯು ಹರಿಸಿ ರಕ್ಷಿಸಯ್ಯಾ ! "

### ಭಕ್ತಿಯು ಹಂಬಲ–191

" ನಾನೊಂದು ನೆನೆದೊಡೆ ತಾನೊಂದು ನೆನೆವುದಯ್ಯಾ.
ನಾನು ನಿನ್ನ ಭಕ್ತಿ-ಜ್ಞಾನ-ವೈರಾಗ್ಯದೊಳಿಪ್ಪೆನೆಂದಡೆ,
ತಾನು ಹೊನ್ನು, ಹೆಣ್ಣು, ಮಣ್ಣಿಗಾಗಿ ಹಂಬಲಿಸುವುದು ನೋಡಾ !
ಒಮ್ಮೆ ದೇವ ! ನಿಮ್ಮತ್ತೆಳಸುವುದೀ ಮನವು.
ಒಮ್ಮೆ ಸಂಸಾರಕ್ಕೆಳಸುವುದೀ ಮನವು.
ಒಮ್ಮೆ ಬೇಕೆಂಬುದೀ ಮನವು.
ಒಮ್ಮೆ ಬೇಡೆಂಬುದೀ ಮನವು.
ಇಂತು ಇಬ್ಬಗೆಯ ಮನದ ಮರ್ಕಟತನವ ಕಳೆದು
ನಿಮ್ಮತ್ತ ಸೆಳೆದು, ಒಮ್ಮನವಾಗಿಸಾ
ಕಾರುಣ್ಯಸಿಂಧು, ಭಕ್ತಪ್ರಿಯಬಂಧು
ಶ್ರೀಶೈಲ ಮಲ್ಲಿಕಾರ್ಜುನ ! "

### ಅಕ್ಷರ ತತ್ತ್ವ ರಹಸ್ಯ–192

" ಅನಾದಿ ಶರಣ ಬಸವನಾ ಹೃತ್ಕಮಲದೊಳಿಪ್ಪಾ
ನಾದ ಬ್ರಹ್ಮನಿಂದ ಓಂಕಾರ ಪ್ರಣವೋದಯವಾಯಿತ್ತು ನೋಡಾ !
ಈ ಓಂಕಾರ ಪ್ರಣವದಲಿ ಅಕ್ಷರಂಗಳುತ್ಪತ್ತಿಯಾಯಿತ್ತು ನೋಡಾ !
ಈ ಅಕ್ಷರಂಗಳೆಲ್ಲ, ಅಕ್ಷರತತ್ತ್ವ ಸ್ವರೂಪ ನಷ್ಟ ಆ ಅಕ್ಷಯ ನಿಧಿಯೆನಿಸಿರ್ಪ !

ಪರಮಾತ್ಮನ ತೋರಲೆಂದೇ ಸೃಷ್ಟಿಯೊಳು ನೆಲಸಿರ್ದುವು ನೋಡಾ !
ಇಂತು ಅಕ್ಷರ ತತ್ತ್ವಜ್ಞಾನ ಸಂಪದವೆಲ್ಲ ಶ್ರೀಶಂಭುಮೂರ್ತಿ ಅಕ್ಷಯಾಂಬರಧಾರಿ
ಎಮ್ಮ ಶ್ರೀಶೈಲ ಮಲ್ಲಿಕಾರ್ಜುನ ಲಿಂಗವನರಿವುದಕ್ಕೆ ಕಾರಣವಾಯಿತ್ತು.

## ಭಕ್ತಿಭೈತ್ರ–193

" ಸಾಗರದ ಮೇಲೆ ನಡೆದು ಹೋಗಬಹುದು ಆದಡೆ,
ಭಕ್ತಿಯೆಂಬುದು ಮಾಡಬಾರದು ನೋಡಾ !
ಗರಗಸದಂತೆ ಅದು ಹೋಗುತ್ತ ಕೊರೆವುದು.
ಬರುವುತ್ತ ಕೊರೆವುದು ನೋಡಾ !
ಭಕ್ತಿಯೆಂಬುದು ಕರಕಷ್ಟ ಕಂಡಯ್ಯಾ !
ಒಂದು ಬಿಟ್ಟು ಒಂದು ಹಿಡಿದಿಹೆನೆಂದಡೆ,
ಅದೆಂತು ಸಾಧ್ಯವಪ್ಪುದು ಹೇಳಯ್ಯಾ ?
ಶ್ರೀಶೈಲ ಮಲ್ಲಿಕಾರ್ಜುನಾ............!
ಆನು ಸಂಸಾರ ಶರಧಿಯೊಳಿರ್ದೊಡು, ಬಿಡದೆ
ನೀನೆನ್ನ ಭಕ್ತಿದೋಣಿಯಿಂ ಕಡೆಗಾಣಿಸಿ ಸಲಹಯ್ಯಾ !"

## "ಧರ್ಮಜ್ಞ" ಕವಿಯ ಬಸವ ಭಕ್ತಿ ಭಾಷೆ–194

"ನೀನೆನಿಸುಕಾಲ ಕಾಡಿ ನೋಡಿದಡು ನಾಧೃತಿಗೆಡೆನಯ್ಯಾ !
ಆನು ಬಸವ ಭಕ್ತಿಯಬಿಡೆನಯ್ಯಾ !
ಎಲುದೋರಿ ನರಹರಿದು, ಕರುಳು ಕುಪ್ಪಳಿಸಿದೊಡು,
ನಲಿದೊಲಿದು ಬಸವ ಬಸವಾ ! ಎಂಬೆನಯ್ಯಾ !
ಆಗಸ ಹರಿದು, ನಕ್ಷತ್ರಂಗಳುದುರಿ ಬಿದ್ದೊಡು,
ಸಾಗರ ಹೃದಯುದಳೆದಾನು ಬಸವ ಬಸವಾ ! ಎಂಬೆನಯ್ಯಾ !
ಭೂಮಿ ಬಿರಿದು ಬಿಚ್ಚಿ ಬೇರಾದಡು, ಆನಂದ ಭಕ್ತಿಯಿಂ
ಭೂಮತತ್ತ್ವವಾಗಿ ನಿಂದು ನಾ ಬಸವ ಬಸವಾ ಎನುತ
ಶ್ರೀ ಬಸವೇಶ್ವರನೊಳಗಡಗಿಪ್ಪೆನಯ್ಯಾ !
ಶ್ರೀಶೈಲ ಮಲ್ಲಿಕಾರ್ಜುನ !"

## ಲಿಂಗ ಲೀಲಾ ವಿಲಾಸ–195

**ಸಾಕು ಮಾಡೈ ಲೋಕದಾಟವ**: "ಪರಶಿವನೆ ! ನಿನ್ನ ಲೀಲಾವಿಲಾಸಕ್ಕಾಗಿ
ಚೈತನ್ಯಶಕ್ತಿ ಮಾಯೆಯು ಹೊರ ಹೊಮ್ಮಿಸಿದೆ !

ನಿನ್ನ ಲೀಲಾ ವಿನೋದಕ್ಕಾಗಿ ಈ ಸೃಷ್ಟಿಯ ಸೃಜಿಸಿದೆ !
ನಿನ್ನ ಲೀಲಾ ವೈಭವಕ್ಕಾಗಿ ಅನಂತಾನಂತ ಆತ್ಮರುಗಳ ಹೊರಗೆಡಹಿದೆ
ಇಂತು ಸರ್ವವೂ ನಿನ್ನ ಲೀಲೆಯಾದಡೆ,
ಎನ್ನಕಾಯ ಕರಣಂಗಳೆಲ್ಲಕ್ಕೂ ನೀನೆ ಕಾರಣ ನೋಡಾ !
'ಕರ್ಮಕಳೆದಲ್ಲದೆ ಭವ ಹಿಂಗದು' ಎಂದಡೆ,
ಎನ್ನ ಹುಟ್ಟು-ಕರ್ಮ-ಧರ್ಮಂಗಳಿಗೆಲ್ಲಕ್ಕೂ ನೀನೆ ಕಾರಣವಾಗಿದ್ದೆ ನೋಡಾ
ಎನ್ನ ಹುಟ್ಟಿಗೆ ಕರ್ಮದ ಹೊರೆ ಹೊರಿಸುವುದಾದಡೆ,
ಎನ್ನ ಸೃಷ್ಟಿಯೊಳು ಹುಟ್ಟಿಸುವ ಮುನ್ನ
ಕರ್ಮವೆಲ್ಲಿತ್ತು ಹೇಳಾ ತಂದೆ ? ಎಲ್ಲವೂ
ನಿನ್ನ ಲೀಲೆಯಾಗಿರಲು, ಎನ್ನ ತಪ್ಪೆಂಬುದಿನ್ನೆಲ್ಲಿ ಹೇಳಾತಂದೆ ?
ಸಾಕು ಮಾಡೈ ತಂದೆ ಈ ನಿನ್ನ ಲೋಕದಾಟವ !
ಆನು-ನೀನೆಂಬುಭಯ ನಿನ್ನಿಂದೆ ಬಂದಿತ್ತು !
ಈ ನಿನ್ನ ಸೃಷ್ಟಿಯ ಲೀಲಾರಂಗಭೂಮಿಯಲ್ಲಿ, ಕಾಣುವ
ಸಾಸಿರಕೋಟಿ ವಿವಿಧ ಬಗೆಯ ಪಾತ್ರಂಗಳೆಲ್ಲವೂ
ನಿನ್ನ ಅನಂತ ಮುಖವಾಡಗಳಿಂದೇ ತೋರಬಂದಿದ್ದುವು ನೋಡಾ !
ಇಂತು ನಿನ್ನ ಲೀಲೆಯ ಆನು ಬಲ್ಲೆನಾಗಿ,
ನಿನ್ನಿಂದಾನು ಬೇರಿಲ್ಲವೆಂದು ತಿಳಿಯಬಂದಿತ್ತು;
ಶ್ರೀಶೈಲ ಮಲ್ಲಿಕಾರ್ಜುನ ಮಹಾಲಿಂಗದಲ್ಲಿ ! "

**ಲಿಂಗತ್ರಯ 196**

"ಪರವಸ್ತುವು ಕರಕಂಜದೊಳಗೆ ಕಾಣಿಸುತಿರಲು,
ಅರೆ ಮರುಳರು ಇದನರಿಯದೆ ಅರಸಿ ಅರಸಿ
ತೊಳಲಿ ಬಳಲಿದರು ನೋಡಾ !
ಗೋವಿನೊಳಗಿರ್ದ ಘೃತವು ತಾ ಹೊರಬಂದು
ಗೋವಿನಂಗದ ರುಜೆಯನಳಿಸುವಂತೆ,
ಆ ಪರಮ ಚಿದ್ಬಿಂದು ಸಾಧಕನ ಜೀವಭಾವವ ಕಳೆಯಲು
ಹೊರಗೆ ಇಷ್ಟಲಿಂಗವಾಗಿ ತೋರುತಿಹುದು ನೋಡಾ !
ಕಾಷ್ಠದೊಳಗಿರ್ದ ಅಗ್ನಿತಾ ಹೊರಬಂದು ಪ್ರಜ್ವಲಿಸಿ
ಕಾಷ್ಠದಾ ಬೆಟ್ಟವನೆ ತಾ ಸುಟ್ಟುರಿದು ಬೆಳಗುವಂತೆ,
ಸಾಧಕನ ಶ್ರೇಷ್ಠ ಚಿತ್‌ಕಳೆಯು ಪೊರಮಟ್ಟು
ಮೋದದಿಂದವನ ಜಡಭಾವವನು ನಿಟ್ಟುರಿಸಲು
ಪ್ರಾಣಲಿಂಗವಾಗಿ ತೋರುತಿಹುದು ನೋಡಾ !

ಮನೆಯೊಳಗಣ ದೀಪ್ತಿ ತಾ ಮನೆಯ ಬಾಗಿಲೊಳೈದಿ,
ಅಂಗಳದ ಕತ್ತಲೆಯ ಹೊರದೂಡುವಂತೆ,
ಚಿನ್ನಾದವುಚ್ಚಳಿಸುತ ತನು ತಮವ ಕಳೆಯಲ್ಕೆ
ಅನುಪಮ ಅದ್ವಯ ಭಾವಲಿಂಗವಾಗಿ ಶೋಭಿಸುವುದು ನೋಡಾ!
ಲಿಂಗಪೀಠವದು ಇಷ್ಟಲಿಂಗವು,
ಗೋಮುಖವೆ ಪ್ರಾಣಲಿಂಗವು,
ಗೋಳಕವು ಭಾವಲಿಂಗವು,
ಅದು ಕಾರಣ ಈ ಲಿಂಗತ್ರಯಗಳನು ಭಕ್ತಿದಳೆದು
ಕರ-ಮನ-ಭಾವದೊಳಗಿರಿಸಿ ಕೃತಾರ್ಥನಹುದು
ಕಾಣಾ, ಶ್ರೀಶೈಲಮಲ್ಲಿಕಾರ್ಜುನ ! ''

### ಶರಣಪಥ ವೈಶಿಷ್ಟ್ಯ 197

'' ಬಯಸಿ ಬಂದುದುಅಂಗಕ್ಕೆ ಭೋಗವಾಯಿತ್ತು.
ಬಯಸದೆ ಬಂದುದು ಲಿಂಗಕ್ಕೆ ಭೋಗವಾಯಿತ್ತು.
ಅಂಗ ಭೋಗ ಅನರ್ಪಿತವೆನಿಸಿತ್ತು.
ಲಿಂಗ ಭೋಗ ಪ್ರಸಾದವೆನಿಸಿತ್ತು.
ಬೇಕೆಂಬುದು ಕಾಯಗುಣವಾದಡೆ,
ಬೇಡೆಂಬುದು ವೈರಾಗ್ಯ ನೋಡಾ.
ಈ ಬೇಕು-ಬೇಡೆಂಬುಭಯವನತಿಗಳೆದು
ಭೋಗಿಸ ಬಲ್ಲಡಾತನೆ ನಿಮ್ಮ ಶರಣನೆಂಬೆ !
ಕೇಳಾ, ಶ್ರೀಶೈಲ ಮಲ್ಲಿಕಾರ್ಜುನ !

### ಪ್ರಾಣಲಿಂಗಪ್ರಭೆ 198

''ಪ್ರಾಣಲಿಂಗದಕಳಾ ಪ್ರಭೆಯೆಂದಡೆ,
ಆಧಾರ ಚಕ್ರದಲ್ಲಿ ಎಳೆಯ ನೇಸರನಂತೆ ಬೆಳಗುತ್ತಿಹುದು ನೋಡಾ.
ಸ್ವಾಧಿಷ್ಠಾನ ಚಕ್ರದಲ್ಲಿ ಹುಣ್ಣಿಮೆಯ ಚಂದ್ರನೋಲು ಬೆಳಗುತ್ತಿಹುದು ನೋಡಾ.
ಮಣಿಪೂರಕ ಚಕ್ರದಲ್ಲಿ ಪ್ರಾಣಲಿಂಗ
ಮಿಂಚಿನಲತೆಯಂತೆ ಬೆಳಗುತ್ತಿಹುದು ನೋಡಾ.
ಅನಾಹತ ಚಕ್ರದಲ್ಲಿ ಪ್ರಾಣಲಿಂಗವು
ಸ್ಫಟಿಕದ ಶಲಾಕೆಯಂತೆ ಬೆಳಗುತ್ತಿಹುದು ನೋಡಾ.

ವಿಶುದ್ಧಿ ಚಕ್ರದಲ್ಲಿ ಪ್ರಾಣಲಿಂಗವು
ಮೌಕ್ತಿಕದ ಗೊಂಚಲದಂತೆ ಬೆಳಗುತ್ತಿಹುದು ನೋಡಾ.
ಆಜ್ಞಾ ಚಕ್ರದಲ್ಲಿ ಪ್ರಾಣಲಿಂಗವು
ರತ್ನದೀಪ್ತಿಯಂತೆ ಬೆಳಗುತ್ತಿಹುದು ನೋಡಾ.
ಬ್ರಹ್ಮ ಚಕ್ರದಲ್ಲಿ ಪ್ರಾಣಲಿಂಗವು
ಪರಂಜ್ಯೋತಿಯಂತೆ ಬೆಳಗುತ್ತಿಹುದು ನೋಡಾ.
ಶಿಖಾ ಚಕ್ರದಲ್ಲಿ ಪ್ರಾಣಲಿಂಗವು ಶುದ್ಧ ತಾರೆಯಂತೆ ಬೆಳಗುತ್ತಿಹುದು ನೋಡಾ.
ಪಶ್ಚಿಮ ಚಕ್ರದಲ್ಲಿ ಉಳಕ ನಕ್ಷತ್ರದಂತೆ ಬೆಳಗುತ್ತಿಹುದು ನೋಡಾ! ಪ್ರಾಣಲಿಂಗವು.!
ಹೇಳಾ, ಶ್ರೀಶೈಲ ಮಲ್ಲಿಕಾರ್ಜುನ ! "

## ಶಿವಯೋಗ 199

" ಬ್ರಹ್ಮರಂಧ್ರದೊಳಿಪ್ಪ ಶಿವಚೈತನ್ಯವಪ್ಪ
ಪರಮ ಚಿತ್ಕಳೆಯನೇ ಭಾವ-ಮನ-ಕರದಲ್ಲಿ
ಶ್ರೀಗುರು ತಂದು ಸಾಹಿತ್ಯವ ಮಾಡಿದನಾಗಿ,
ಭಾವದಲ್ಲಿ ಸತ್‌ಸ್ವರೂಪವಹ-ಭಾವಲಿಂಗವೆನಿಸಿ,
ಪ್ರಾಣದಲ್ಲಿ ಚಿತ್ ಸ್ವರೂಪವಹ-ಪ್ರಾಣಲಿಂಗವೆನಿಸಿ,
ಕರಸ್ಥಲದಲ್ಲಿ ಆನಂದರೂಪವಹ-ಇಷ್ಟಲಿಂಗವೆನಿಸಿ,
ಒಂದೇ ವಸ್ತು ತನು-ಮನ-ಭಾವಂಗಳಲ್ಲಿ
ಇಷ್ಟ-ಪ್ರಾಣ-ಭಾವವಾದ ಭೇದವನರಿದು
ಇಷ್ಟಲಿಂಗವಂ ದೃಷ್ಟಿಯಿಂದ ಗ್ರಹಿಸಿ,
ಪ್ರಾಣಲಿಂಗವಂ ಮನ ಜ್ಞಾನದಿಂದಗ್ರಹಿಸಿ,
ತೃಪ್ತಿಲಿಂಗವಂ ಭಾವ ಜ್ಞಾನದಿಂದ ಗ್ರಹಿಸಿ,
ಈಲಿಂಗತ್ರಯವಿಡಿದು ಆನಂದದಿಂ ಆಚರಿಸಿ,
ಲಿಂಗದೊಡನೆ ಕೂಡಿ ಆ ಲಿಂಗವೆ ತಾನಾಗಿ
ವಿರಾಜಿಸುತಿಪ್ಪುದೀಗ ಶಿವಯೋಗ !
ಕಾಣಾ, ಶ್ರೀಶೈಲ ಮಲ್ಲಿಕಾರ್ಜುನ ! "



# ಕನ್ನಡ ಭಾಷಾ ಬೆಳವಣಿಗೆ

ಜೈನಹಳ್ಳಿ ಸತ್ಯನಾರಾಯಣಗೌಡ, ನಂ. 319, ಡಿ. ಸುಬ್ಬಯ್ಯ ರಸ್ತೆ, ಮೈಸೂರು–570 024.

ಕನ್ನಡಿಗರಾದ ನಾವು ಕನ್ನಡನಾಡು, ನುಡಿ ಇತ್ಯಾದಿಗಳ ಇತಿಮಿತಿಗಳೇನು, ಸಾಧಕ ಬಾಧಕಗಳೇನು ಇವುಗಳನ್ನು ಕುರಿತು ಯೋಚಿಸಬೇಕಾದುದು ಇಂದು ಅನಿವಾರ್ಯ ವಾಗಿದೆ. ಕರ್ನಾಟಕದಲ್ಲಿ ಕನ್ನಡದ ಸ್ಥಾನಮಾನವೇನು, ಸ್ಥಿತಿಗತಿಗಳೇನು ಎನ್ನು ವುದನ್ನು ನೆನೆಸಿಕೊಂಡಾಗ ಯಾರಿಗಾದರೂ ಕನ್ನಡದಸ್ಥಿತಿ ಶೋಚನೀಯ ಎನಿಸದಿರದು ಕನ್ನಡಭಾಷೆಯ ಬೆಳವಣಿಗೆಯ ಬಗ್ಗೆ ಹಲವಾರು ಮಹಾನ್ ವ್ಯಕ್ತಿಗಳು ತಮ್ಮ ಜೀವ ವನ್ನೇ ಸವೆಸಿದರು. ಗಡಿ, ನುಡಿ, ನಾಡು ಇವುಗಳಿಗಾಗಿ ಮೊದಲಿನಿಂದಲೂ ಹೋರಾಟ ಅವ್ಯಾಹತವಾಗಿ ನೆಡೆದುಬಂದಿದೆ. ಕನ್ನಡ ಸಾಹಿತ್ಯ ಹಾಗೂ ಭಾಷಾ ಬೆಳವಣಿಗೆಯ ದೃಷ್ಟಿಯಿಂದ 1951 ರಲ್ಲಿ ಸಾಹಿತ್ಯ ಪರಿಷತ್ತು ಬೆಂಗಳೂರಿನಲ್ಲಿ ಉದಯವಾಯಿತು. ಕರ್ನಾಟಕದ ಸರ್ವತೋಮುಖ ಬೆಳವಣಿಗೆಗೆ ಕನ್ನಡ ನುಡಿಯ ಪುರೋಭಿವೃದ್ಧಿಗೆ ತಮ್ಮನ್ನೇ ತಾವು ಪಣವಾಗಿಟ್ಟುಕೊಂಡವರ ಪಟ್ಟಿಯೇ ಸಿದ್ದವಾಗುತ್ತದೆ, ಆಲೂರ ವೆಂಕಟರಾಯರಂತಹ ಕನ್ನಡದ ಕಟ್ಟಾಭಿಮಾನಿಗಳು ಅಂದಿನ ಸ್ಥಿತಿಗತಿಗಳನ್ನು ಗಮನಿಸಿ ಕನ್ನಡದ ಕೆಲಸಕ್ಕಾಗಿ ಜನರನ್ನು ಪ್ರಚೋದಿಸಿದರು.

ಕನ್ನಡ ಸಾಹಿತ್ಯ ಪರಿಷತ್ತು ಹಲವಾರು ಯೋಜನೆಗಳನ್ನು ಕೈಗೆತ್ತಿಕೊಂಡು ನಾಡುನುಡಿಗಳ ಏಳ್ಗೆಗಾಗಿ ದುಡಿಯುತ್ತಾ ಬಂತು. ಬಿನಗಲ್ ರಾಮರಾವ್, ಬೆಳ್ಳಾವೆ ವೆಂಕಟನಾರಾಯಣಪ್ಪ–ಮೂಾವೀಡು ಕೃಷ್ಣರಾಯರು, ಕರ್ಪೂರ ಶ್ರೀನಿವಾಸರಾಯರು ಡಿ.ವಿ. ಗುಂಡಪ್ಪ, ಮಾಸ್ತಿಯವರು, ಎ. ಎನ್. ಮೂರ್ತಿರಾವ್, ಬಿ. ಎಂ. ಶ್ರೀ ಇತ್ಯಾದಿ ಈ ಮಹನೀಯರ ಪರಿಶ್ರಮದಿಂದಾಗಿ ಹಲವಾರು ಕಾರ್ಯಕ್ರಮಗಳು ರೂಪಿತಗೊಂಡವು. ಸಾಹಿತ್ಯ ಅಕಾಡೆಮಿ, ಸಂಸ್ಕೃತಿ ಮತ್ತು ಪ್ರಚಾರ ಇಲಾಖೆ, ಮೈಸೂರು, ಬೆಂಗಳೂರು ಕರ್ನಾಟಕ ವಿಶ್ವವಿದ್ಯಾನಿಲಯಗಳ ಕನ್ನಡ ಅಧ್ಯಯನ ಸಂಸ್ಥೆಗಳು ಕನ್ನಡ ಸಾಹಿತ್ಯ ಹಾಗೂ ಭಾಷಾ ಬೆಳವಣಿಗೆಯ ದೃಷ್ಟಿಯಿಂದ ತಮ್ಮ ಸೇವೆಯನ್ನು ಸಲ್ಲಿಸುತ್ತಾ ಬಂದಿವೆ. ಇಷ್ಟೆಲ್ಲಾ ಕಾರ್ಯಕ್ರಮಗಳು ರೂಪಿತವಾಗಿದ್ದರೂ ಕರ್ನಾಟಕದಲ್ಲಿ ಕನ್ನಡದ ಸ್ಥಾನಮಾನವೇನು ಎನ್ನುವುದನ್ನು ನೆನೆಸಿಕೊಂಡಾಗ ಯಾವ ಕನ್ನಡಿಗನಿಗಾದರೂ ಗಾಬರಿಯಾಗದಿರದು.

ಇತ್ತೀಚಿನ ದಿನಗಳಲ್ಲಿ ಕನ್ನಡದ ಹೆಸರಿನಲ್ಲಿ ನಡೆಯುವ ಹಲವಾರು ಕಾರ್ಯಕ್ರಮ-ಗಳನ್ನು ನೋಡಿದಾಗ ಮನಸ್ಸಿಗೆ ತಡೆಯಲಾಗದಷ್ಟು ವ್ಯಥೆಯಾಗುತ್ತದೆ. 1956 ರಲ್ಲಿಯೇ ಆಗಬೇಕಾಗಿದ್ದ ಕನ್ನಡದ ನಾಮಕರಣಕ್ಕೆ ಸುಮಾರು ವರ್ಷಗಳು ಕಾಯಬೇಕಾ ಯಿತು ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಘೋಷಿಸಲು ಸುಮಾರು 24ವರ್ಷಗಳು

ಕಲಾವಕಾಶ ಬೇಕಾಯಿತು. ಇನ್ನು ಶಿಕ್ಷಣ ಕನ್ನಡ ಮಾಧ್ಯಮದಲ್ಲಿ ಆಗಬೇಕೆನ್ನುವ ಕಲ್ಪನೆ ಕನಸಿನ ಕೂಸಾಗಿಯೇ ಉಳಿದಿದೆ. ಕನ್ನಡದ ಬಗ್ಗೆ ಮಾತನಾಡುವಾಗ ನಮ್ಮವರ ಆರ್ಭಟ, ಅಟ್ಟಹಾಸಗಳು ಮುಗಿಲು ಮುಟ್ಟುತ್ತವೆ. ಕನ್ನಡದ ಕಟ್ಟಾಭಿಮಾನಿಗಳಿಗೆ ನಮ್ಮಲ್ಲಿ ಕೊರತೆ ಇಲ್ಲ ಕನ್ನಡವೇ ನನ್ನ ಉಸಿರು, ಕನ್ನಡವೇ ನನ್ನ ಪ್ರಾಣ, 'ಕನ್ನಡಕ್ಕಾಗಿಯೇ ನನ್ನ ದೇಹ ಮುಡಿಪು ಎನ್ನುವ ಅಸಹಾಯ ಶೂರರಿಗೇನು ನಮ್ಮಲ್ಲಿ ಕಡಿಮೆ ಇಲ್ಲ. ಇವರೆಲ್ಲ ಕನ್ನಡ ನಾಡಿಗಾಗಿ, ನುಡಿಗಾಗಿ ಸಾಧಿಸಿದ್ದೇನು ? ಎನ್ನುವುದನ್ನು ಅವಲೋಕಿಸಿದಾಗ ಇವರೆಲ್ಲರ ಆರ್ಭಟ ಅಟ್ಟಹಾಸಗಳು ಕೇವಲ ಬೂಟಾಟಿಕೆ ಎನಿಸದಿರದು. ಕನ್ನಡ ಭಾಷಾ ಬೆಳವಣಿಗೆಯ ದೃಷ್ಟಿಯಿಂದ ಕರ್ನಾಟಕ ದಲ್ಲಿ ಸಮಗ್ರವಾದ ಯಾವ ಯೋಜನೆಯೂ ಇನ್ನೂ ರೂಪಿತವಾಗಿಲ್ಲ ನಮ್ಮಲ್ಲಿ ಸಾಹಿತ್ಯ ವಿಪುಲವಾಗಿ ಬೆಳೆದಿದೆ. ಶ್ರೀ ಕುವೆಂಪು, ದ.ರಾ. ಬೇಂದ್ರೆ, ಪು.ತಿ.ನ, ಮಾಸ್ತಿ, ಶಿವರಾಮಕಾರಂತ, ಗೊರೂರು ರಾಮಸ್ವಾಮಿ ಅಯ್ಯಂಗಾರ್ ಇವರೆಲ್ಲರೂ ಸಾಹಿತ್ಯದ ಒಂದೊಂದು ಭಾಗವಾಗಿ ನಿಲ್ಲುತ್ತಾರೆ. ಈ ಸಂದರ್ಭದಲ್ಲಿ ಒಂದು ಪ್ರಧಾನವಾದ ಅಂಶವನ್ನು ಗಮನಿಸಬೇಕಾದುದು 'ಅನಿವಾರ್ಯ. ಸಾಹಿತ್ಯವೇ ಬೇರೆ, ಭಾಷಾ ಬೆಳವಣಿಗೆಯೇ ಬೇರೆ, ಜನ ಸಾಮಾನ್ಯರನ್ನೊಳಗೊಂಡ, ಸಮಾಜದ ಆಶೋತ್ತರಗಳನ್ನು ಈಡೇರಿಸುವ ಕರ್ನಾಟಕದ ಸಮಗ್ರತೆಯನ್ನು ಕಾಪಾಡಿಕೊಳ್ಳುವ ಭಾಷೆ ನಮ್ಮಲ್ಲಿನ್ನೂ ರೂಪುಗೊಂಡಿಲ್ಲ. ನಾಲ್ಕು ಕೋಟಿ ಕನ್ನಡಿಗರ ಮನಸ್ಸಿನಲ್ಲಿ ಕನ್ನಡದ ಮುದ್ರೆಯನ್ನೊತ್ತುವ ಪರಿಣಾಮಕಾರಿಯಾದ ಕಾರ್ಯವನ್ನು ಸರ್ಕಾರ ವಾಗಲಿ, ಸಂಘ ಸಂಸ್ಥೆಗಳಾಗಲಿ ಇನ್ನೂ ಕೈಗೊಂಡಿಲ್ಲ - ಆಂಗ್ಲ ಭಾಷೆಯ ಪ್ರಭಾವ ಇನ್ನೂ ದಟ್ಟವಾಗಿದೆ ಕಲಿತವರಿಂದ ಹಿಡಿದು ಕಲಿಯದವರವಿಗೂ ಈ ಭಾಷೆಯು ತನ್ನದೇ ಆದ ಪರಿಣಾಮವನ್ನು ಬೀರಿ ಕನ್ನಡ ಭಾಷೆಯ ಅಸ್ತಿತ್ವಕ್ಕೆ ಧಕ್ಕೆಯನ್ನುಂಟು ಮಾಡಿದೆ. ಕನ್ನಡ ಆಡಳಿತಭಾಷೆಯಾದ ಮೇಲೆ ಕಡ್ಡಾಯವಾಗಿ ಬಳಸಬೇಕೆಂಬ ಸರ್ಕಾರದ ಕಟ್ಟಪ್ಪಣೆಯಾದರೂ, ಯಾರೂ ಅದನ್ನು ಸರಿಯಾಗಿ ಪಾಲಿಸುತ್ತಿಲ್ಲ. ಅರ್ಧ ಕನ್ನಡ, ಉಳಿದರ್ಧ ಇಂಗ್ಲೀಷ್ ಹೀಗಾಗಿ ಕಛೇರಿಯ ಯಾವ ಕೆಲಸಗಳೂ ಕನ್ನಡದಲ್ಲಿ ನಡೆಯುತ್ತಿಲ್ಲ. ಯಾರಿಂದ ಕನ್ನಡ ಬೆಳೆಯಬೇಕೋ ಅವರಲ್ಲಿಯೇ ಕನ್ನಡ ಭಾಷಾ ಬೆಳವಣಿಗೆಯ ಬಗ್ಗೆ ಸಮಗ್ರವಾದ ಕಲ್ಪನೆ ಇಲ್ಲದಿದ್ದರೆ ಭಾಷೆ ಬೆಳೆಯುವುದಾದರೂ ಹೇಗೆ ? ಇದು ಭಾಷೆಯನ್ನು ಬಳಸುವವರ ತಪ್ಪಲ್ಲ ಭಾಷೆಯನ್ನು ಬೆಳೆಸುವವರ ದೌರ್ಬಲ್ಯವೆನ್ನದೆ ಅನ್ಯಮಾರ್ಗವಿಲ್ಲ.

ನಮ್ಮ ಅನಿಸಿಕೆ ಅನುಭವಗಳನ್ನು ಮತ್ತೊಬ್ಬರಿಗೆ ಸ್ಪಷ್ಟವಾಗಿ ತಿಳಿಸಲು ಮಾತೃಭಾಷೆಯಿಂದ ಮಾತ್ರ ಸಾಧ್ಯ. ಶಿಕ್ಷಣ ಕನ್ನಡಮಾಧ್ಯಮದಲ್ಲಿ ಆಗಬೇಕು ಎನ್ನುವುದು ನಿಜಕ್ಕೂ ಆರೋಗ್ಯಕರವಾದ ಸಂಗತಿ. ಆದರೆ ಈ ಅಭಿಪ್ರಾಯ

ಕಾರ್ಯಗತವಾಗಲು ನಮ್ಮಲ್ಲಿ ಸಿದ್ಧತೆಗಳಾಗಿವೆಯೇ ? ಎನ್ನುವುದರತ್ತ ನಾವಿಂದು ಯೋಚಿಸಬೇಕಾಗಿದೆ. ವಿದ್ಯಾವಂತರೆನಿಸಿಕೊಂಡವರು ಬಹಳಷ್ಟು ಮಂದಿ ಇಂಗ್ಲೀಷ್ ವ್ಯಾಮೋಹದಿಂದ ಕನ್ನಡ ಶಾಲೆಗಳಿಗೆ ಮಕ್ಕಳನ್ನು ಕಳುಹಿಸದೆ ಪ್ರಾರಂಭದಲ್ಲಿಯೇ ಕನ್ನಡದ ಪರಿಚಯವಿಲ್ಲದಂತೆ ಮಾಡಿಮುಂದಿನ ಜೀವನವನ್ನು ಅಸ್ಪಷ್ಟಗೊಳಿಸುತ್ತಾರೆ. ಕನ್ನಡ ಮಾಧ್ಯಮ ಸಾರ್ಥವಾಗಬೇಕಾದರೆ ನಾವು ಕಲಿಯುವ, ಕಲಿಯಬೇಕಾದ ಸಾಮಗ್ರಿಗಳು ಮೊದಲೇ ಕನ್ನಡದಲ್ಲಿ ಸಿದ್ಧವಾಗಿರಬೇಕು. ಸ್ನಾತಕ, ಸ್ನಾತಕೋತ್ತರ ಪದವಿಗಳಲ್ಲಿ ವ್ಯಾಸಂಗಮಾಡುವವರಿಗೆ ಇಂದು ನಾವು ಎಷ್ಟು ಕನ್ನಡ ಪುಸ್ತಕಗಳನ್ನು ಒದಗಿಸಲು ಸಿದ್ಧರಿದ್ದೇವೆ? ತಾಂತ್ರಿಕ, ವೈದ್ಯಕೀಯ ಮುಂತಾದ ವೈಜ್ಞಾನಿಕ ವಿಷಯಗಳು ಹೇರಳವಾಗಿ ಆಂಗ್ಲಭಾಷೆಯಲ್ಲಿವೆ. ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಲೆಕ್ಕಶಾಸ್ತ್ರ, ಭೌತಶಾಸ್ತ್ರ, ರಸಾಯಶಾಸ್ತ್ರ, ಭೂಗರ್ಭಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಇತ್ಯಾದಿ ಇವುಗಳನ್ನು ಓದಲು ನಮಗೆ ಕನ್ನಡದಲ್ಲಿ ಪುಸ್ತಕಗಳು ಬೇಡವೇ? ಅನುವಾದದ ಕಾರ್ಯ ನಮ್ಮಲ್ಲಿ ಸಮರ್ಪಕವಾಗಿ ನಡೆಯುತ್ತಿಲ್ಲ. ಪಠ್ಯವಿಷಯಗಳನ್ನೊಳಗೊಂಡಂತೆ ಸ್ವತಂತ್ರ ಕೃತಿಗಳು ಇನ್ನೂ ಬಹಳಷ್ಟು ಬರಬೇಕಾಗಿದೆ. ಈ ಕಾರಣಕ್ಕಾಗಿಯೇ ಕನ್ನಡ ಮಾಧ್ಯಮ ಅಷ್ಟು ಸುಲಭವಾಗಿ ಸಾಧ್ಯವಾಗುತ್ತಿಲ್ಲ.

ಕನ್ನಡದ ಹೆಸರಿನಲ್ಲಿ ಪೋಲಾಗುತ್ತಿರುವ ಹಣವನ್ನು ಊಹಿಸಿಕೊಂಡಾಗ ಮನಸ್ಸಿಗೆ ನಿಜವಾಗಿಯೂ ಸಂಕಟವಾಗುತ್ತದೆ, ಹಿಂದಿನ ಕವಿ ಕಾವ್ಯಗಳ ಗ್ರಂಥಗಳನ್ನು ಪರಿಷ್ಕರಿಸಿ ಪ್ರಕಟಿಸುವುದಾಗಲಿ, ಅವುಗಳನ್ನು ಅರ್ಥೈಸುವುದಾಗಲಿ, ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಇತ್ಯಾದಿ ಇವು ಬೇಡವೆಂದಲ್ಲ. ಸಾಹಿತ್ಯದಲ್ಲಿ ಎಲ್ಲಾ ಪ್ರಕಾರಗಳು ಬೆಳೆಯಬೇಕು. ಆದರೆ ಇವೆಲ್ಲ ಹೊಸ ಜಾಡಿನಲ್ಲಿ ಸಾಗಿ ಹೊಸ ಮಾರ್ಗವನ್ನು ಕಂಡುಕೊಂಡು ಜೀವನದ ಸಾರ್ಥಕತೆಗೆ ಪೂರಕವಾಗಬೇಕು.

ನಮ್ಮಲ್ಲಿ ಪ್ರಾಮಾಣಿಕ ಪ್ರಯತ್ನಕ್ಕಿಂತ ಪ್ರಚಾರಕ್ಕೆ ಹೆಚ್ಚು ಮಹತ್ವ. ಸಾಹಿತ್ಯ ಸಮ್ಮೇಳನಗಳಿಗೆ ಖರ್ಚುಮಾಡುವ ಹಣ ಎಷ್ಟರಮಟ್ಟಿಗೆ ನಾಡು, ನುಡಿಗಳ ಪುರೋಭಿವೃದ್ಧಿಗೆ ಅನುಕೂಲವಾಗಿದೆ ಎನ್ನುವುದನ್ನು ನಾವು ವಿವೇಚಿಸಚಿಸಬೇಕಾಗಿದೆ. ಹಲವಾರು ಗೋಷ್ಠಿಗಳನ್ನು ಏರ್ಪಡಿಸಿ ಚರ್ಚಿಸುವ ಈ ಚರ್ಚೆಗಳಿಂದ ಯಾರಿಗೆ ಎಷ್ಟರಮಟ್ಟಿಗೆ ಉಪಯೋಗವಾಗುತ್ತದೆ ಎನ್ನುವುದನ್ನು ಗಮನಿಸಬೇಕಾಗಿದೆ. ಕಲಿತವರಿಗಾಗಿ, ಸಾಹಿತ್ಯ ಬಲ್ಲವರಿಗಾಗಿ ಸಾಹಿತಿಗಳು ತಮ್ಮ ಪ್ರತಿಭೆ ವಿದ್ವತ್ತಿನಿಂದ ಮನಮೋಹಕವಾದ, ರಂಜಕವಾದ ಮಾತುಗಳನ್ನು ಬಳಸಿ ಸಭಿಕರನ್ನು ತಣಿಸಿದರೆ ಸಾಕೆ? ಸಾಹಿತ್ಯ ಅಷ್ಟೇ ಏಕೆ ಓದು ಬರಹವೇ ಬಾರದ ನೂರಕ್ಕೆ ಎಪ್ಪತ್ತರಷ್ಟು ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಜನಕ್ಕೆ ಇದರಿಂದ ಪ್ರಯೋ

ಜನವೇನು ? ನವ್ಯ ದಲಿತ, ಬಂಡಾಯ ಇತ್ಯಾದಿ ಸಾಮಾನ್ಯರ ಹಿತಚಿಂತನೆಯನ್ನೇ ಪ್ರಧಾನವಾಗಿ ಯೋಚಿಸುವ ಈ ಪ್ರಕಾರಗಳಿಂದ ಸಾಮಾನ್ಯರಿಗೆ ಏನಾದರೂ ಉಪಯೋಗವಿದೆಯೇ ? ದೀನದಲಿತರು, ನಿರ್ಗತಿಕರು ಜನಸಾಮಾನ್ಯರು ಈ ಸಾಹಿತಿಗಳ ವಿಚಾರವಂತರ ಮನರಂಜನೆಗೆ ಆಹಾರವಾಗಬೇಕೆ ? ಕೇವಲ ಒಂದು ವರ್ಗದ ಜನರ ಮನರಂಜನೆಗಾಗಿಯೇ ಇದು ನಡೆಯುವುದಾದರೆ ಇದಕ್ಕಾಗಿ ಲಕ್ಷಾಂತರ ರೂಪಾಯಿಗಳು ಖರ್ಚಾಗಬೇಕೆ ? ಕೇವಲ ಪ್ರಚಾರ, ಪ್ರತಿಷ್ಠೆಗಳಿಂದ ಕನ್ನಡ ಭಾಷೆ ಬೆಳೆದು ಕರ್ನಾಟಕದ ಏಳ್ಗೆಯಾಗದು.

ಕನ್ನಡ ಭಾಷೆಯ ಸ್ಥಾನ ಇದರ ಸ್ಥಿತಿ ಇಷ್ಟೊಂದು ಶೋಚನೀಯವಾಗಿರುವಾಗ ಕನ್ನಡದ ಹೆಸರಿನಲ್ಲಿ ಹಣ ಪೋಲು ಮಾಡುವುದಾದರೂ ಏಕೆ ? ಕರ್ನಾಟಕ ರಾಜ್ಯದಲ್ಲಿ ಆಡಳಿತ ಭಾಷೆ ಹೆಸರಿಗೆ ಮಾತ್ರ ಜಾರಿಯಲ್ಲಿದೆ. ಅದು ನಿಜವಾಗಿಯೂ ಜಾರಿಗೆ ಬರಬೇಕಾಗಿದ್ದರೆ ಸವಲತ್ತುಗಳು ಸಾಲದಾಗಿವೆ. ಈಗಿರುವಷ್ಟು ಶಬ್ದಕೋಶ, ಸಲಕರಣೆಗಳಿಂದ ವ್ಯವಹರಿಸುವುದು ಕಷ್ಟವಾಗುತ್ತದೆ. ನಮ್ಮ ರಾಜ್ಯದಲ್ಲಿ ಎಪ್ಪತ್ತೈದಕ್ಕೂ ಹೆಚ್ಚು ಇಲಾಖೆಗಳಿದ್ದು ಪ್ರತಿಯೊಂದು ಇಲಾಖೆಗೂ ಒಂದೊಂದು ಶಬ್ದಕೋಶ ಅಗತ್ಯವಾಗುತ್ತದೆ. ಶಿಕ್ಷಣ ಕನ್ನಡ ಮಾಧ್ಯಮದಲ್ಲಿ ನಡೆಯಬೇಕಾದರೆ ಅನುವಾದದ ಕಾರ್ಯ ಆಗಬೇಕಾಗುತ್ತದೆ. ಪತ್ಯ ವಿಷಯಗಳನ್ನೊಳಗೊಂಡ ಅನುವಾದಿತ ಇಲ್ಲವೇ ಸ್ವತಂತ್ರ ಕೃತಿಗಳು ನಮಗಿಂದು ಹೆಚ್ಚಿನ ಸಂಖ್ಯೆಯಲ್ಲಿ ಬೇಕಾಗುತ್ತವೆ. ಸರ್ಕಾರವು ಸಂಘ ಸಂಸ್ಥೆಗಳ ಸಾಹಿತಿಗಳ, ಬುದ್ಧಿಜೀವಿಗಳ, ಶ್ರಮವನ್ನು ಉಪಯೋಗಿಸಿಕೊಂಡು ದುಡಿಯುವುದಾದರೆ ಅನ್ಯ ಭಾಷೆಗಳ ಪ್ರಭಾವ ಇಲ್ಲದಂತಾಗಿ ಕರ್ನಾಟಕದ ಜನ ಜೀವನದಲ್ಲಿ ಕನ್ನಡ ಅಚ್ಚಳಿಯದೇ ತನ್ನ ಮುದ್ರೆಯನ್ನೊತ್ತಿ ಕರ್ನಾಟಕತ್ವದ ವಿಕಾಸಕ್ಕೆ ನಾಂದಿಯಾಗುತ್ತದೆ.

**ಶಿಕ್ಷಣ ಮಾಧ್ಯಮ ಕನ್ನಡದಲ್ಲಿ :** ದೇಶದ ಇನ್ನಿತರ ರಾಜ್ಯಗಳಾದ ಉತ್ತರ ಪ್ರದೇಶ, ತಮಿಳುನಾಡು, ಆಂಧ್ರಪ್ರದೇಶ, ಹಿಮಾಚಲ, ಹರಿಯಾಣ ಮತ್ತಿತರ ಸರ್ಕಾರಗಳು ಆಯಾಯ ರಾಜ್ಯಗಳ ಮಾತೃ ಭಾಷೆಯಲ್ಲಿಯೇ ಶಿಕ್ಷಣ ಮಾಧ್ಯಮವನ್ನು ಕಡ್ಡಾಯ ಮಾಡುವ ದೃಢ ನಿಲುವು ತೆಗೆದುಕೊಂಡಿರುವ ಹಾಗೆ ನಮ್ಮ ಸರ್ಕಾರ ದೃಢ ನಿಲುವು ತೆಗೆದುಕೊಳ್ಳಲು ಇರುವ ಅಡ್ಡಿಯಾದರೂ ಏನು ? ಕರ್ನಾಟಕದಲ್ಲಿ ವಾಸಿಸುವವರೆಲ್ಲ ಕನ್ನಡಿಗರು ಎಂದಮೇಲೆ ಕನ್ನಡವನ್ನು ಕಡ್ಡಾಯವಾಗಿ ಎಲ್ಲರೂ ಕಲಿಯಲೇಬೇಕು. ಈ ನೆಲ, ಜಲ ಸಂಪತ್ತನ್ನು ಉಪಯೋಗಿಸಿಕೊಂಡು ಬದುಕುವ ಜನ ಈ ನೆಲದ ಭಾಷೆಯನ್ನು ಕಲಿಯಬೇಡವೇ ? ಭಾಷಾ ಕಲಿಕೆಯ ಅಗತ್ಯತೆಯನ್ನು ಸ್ವಯಂಸ್ಫೂರ್ತಿಯಿಂದ ಮೂಡುವಂತೆ ಮಾಡುವ ಸನ್ನಿವೇಶವನ್ನು ನಾವಿಂದು ಸೃಷ್ಟಿಸಬೇಕಾಗಿದೆ.

ಇಂಗ್ಲೀಷ್ ಕಲಿಕೆ, ಇಂದಿನ ವೈಜ್ಞಾನಿಕ ಯುಗದಲ್ಲಿ ಅನಿವಾರ್ಯ- ಜಗತ್ತಿನ ಯಾವುದೇ ಮೂಲೆಯನ್ನು ಸ್ಪಂದಿಸಬೇಕಾದರೂ ಆ ಭಾಷೆಯ ಪೂರ್ಣ ಪಾಂಡಿತ್ಯ ಅಗತ್ಯ ಎಂಬುದರಲ್ಲಿ ಎರಡನೇ ಮಾತಿಲ್ಲ. ಕನ್ನಡದ ಶ್ರೇಷ್ಠ ವಿದ್ವಾಂಸರು ಒಂದಲ್ಲ ಒಂದು ರೀತಿ ಇಂಗ್ಲೀಷ್ ಸಾಹಿತ್ಯದಿಂದ ಪ್ರಭಾವಿತರಾದರೇ. ತಾನು ವಾಸಿಸುವ ಪರಿಸರದ ಭಾಷೆಯ ಪೂರ್ಣ ಅರಿವು ಪ್ರಾಥಮಿಕ ಮತ್ತು ಪ್ರೌಢಶಾಲಾ ಹಂತಗಳಲ್ಲಿ ವಿದ್ಯಾರ್ಥಿಗಳು ಮುಗಿಸಿದರೆ ಉನ್ನತ ವಿದಾಭ್ಯಾಸವನ್ನು ಅವರು ಇಷ್ಟಬಂದ ಭಾಷೆಯಲ್ಲಿ ಅಧ್ಯಯನ ಮಾಡಲು ಅನುಕೂಲವಾಗುತ್ತದೆ. ಇದರಿಂದ ಉನ್ನತ ವಿದ್ಯಾಭ್ಯಾಸದಲ್ಲಿ ಇಂಗ್ಲೀಷ್ ಕಲಿಕೆಗೂ ಹಿನ್ನಡೆವುಂಟಾಗುವುದಿಲ್ಲ.

**ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಪಡೆದವರಿಗೆ ಉದ್ಯೋಗ ಮೀಸಲಾತಿ ಪದ್ಧತಿ ಜಾರಿಗೆ ಬರಲಿ:**

ಕೇಂದ್ರ ಸರ್ಕಾರವೇ ಪ್ರಾದೇಶಿಕ ಭಾಷೆಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕಲಿಸಬೇಕೆಂಬ ನಿಯಮ ರೂಪಿಸಿರುವಾಗ ರಾಜ್ಯ ಸರ್ಕಾರ ಅಲಕ್ಷಿಸುವುದು ಸಲ್ಲದು. ಕನ್ನಡ ಭಾಷೆಯಲ್ಲಿ 1 ರಿಂದ 10 ನೇ ತರಗತಿಯವರೆಗೆ ಅಭ್ಯಾಸ ಮಾಡಿದವರಿಗೆ ಉನ್ನತ ವಿದ್ಯಾಭ್ಯಾಸಕ್ಕೆ ಹಾಗೂ ಉದ್ಯೋಗ ಮೀಸಲು ಪದ್ಧತಿಯನ್ನು ಜಾರಿಗೆ ತಂದರೆ ಇಂಗ್ಲೀಷ್ ವ್ಯಾಮೋಹ ತಾನಾಗಿಯೇ ನಿಲ್ಲುತ್ತದೆ. ಈ ಕೆಚ್ಚೆದೆಯನ್ನು ಸರ್ಕಾರ ದಿಟ್ಟವಾಗಿ ತೋರಬೇಕು.

---

## ಕರುನಾಡ ಗೀತೆ

–ಶ್ರೀ ಮೂಜಗಂ. ಮೊಗ್ಗೆಯ ಮಾಲೆಯಿಂದ.

ವಿಜಯವಾಗಲಿ ನಮ್ಮ ತಾಯಿ ಕನ್ನಡನಾಡು
ಸುಜನ ಸಂಕುಳವನ್ನು ಪೆತ್ತು ಮೆರದಿಹನಾಡು
ಭಜಕರಿಂದಲಿ ತಾನು ಭಜಿಸಿಗೊಂಡಿಹನಾಡು
ಕುಜನರಿಂಗನುನಯದಿ ನೀತಿ ಪೇಳಿದ ನಾಡು

ವೀರವೀರತಿಯಮಣಿಯು ಅಲ್ಲಮಪ್ರಭುದೇವ
ವೀರಶಿವಕುಲವನ್ನು ಮೆರಸಿದಾ ಬಸವಣ್ಣ
ವೀರಯೊಗಿಕುಮಾರನ ಪಡೆದು ಶೋಭಿಪನಾಡು
ಭೂರಿಸದ್ಗುಣಿಗಳನು ಪಡೆದುದೀಕರುನಾಡು

ಚೆಂದ ಜನಗಳಿಗೆಲ್ಲ ಮುತ್ತಿನಂತಹ ವಚನ
ಅಂದದಿಂದಲಿ ಪೇಳ್ದ ಸತ್ಯ ಶರಣರ ಬೀಡು
ಚಂದ್ರ ಶೇಖರನನ್ನು ಬೇಗನೊಲಿಸುವನಾಡು
ಕಂದ "ಮಹಂತನು" ಬರೆದ ಭಕುತಿಯಿಂದೀಪಾಡು

"ಮಾಟಕೂಟ" ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ

ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ

ನಿಂದಿರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ

# ಭಾಷಾನಿರಭಿಮಾನ

ಡಾ|| ಸಂಜೀವಶೆಟ್ಟಿ, ಮುಖ್ಯಸ್ಥರು ಕನ್ನಡ ವಿಭಾಗ, ಕೆ.ಜಿ. ಸೋಮಯ್ಯ ಕಲಾ ಮತ್ತು
ವಾಣಿಜ್ಯ ಕಾಲೇಜು ವಿದ್ಯಾವಿಹಾರ (ಪೂರ್ವ) ಮುಂಬಯಿ-400077

ಕನ್ನಡ ಭಾಷಾ ನಿರಭಿಮಾನವನ್ನು ಟೀಕಿಸಿ, ಒಳನಾಡ, ಹೊರನಾಡ ಕನ್ನಡಾಭಿಮಾನಿಗಳಿಂದ ವ್ಯಕ್ತವಾಗುವ ಶಕ್ತಿಯುತ ಮಾತುಗಳು ಸತ್ಯನಿಷ್ಠುರವಾದವುಗಳಾಗಿವೆ; ಕನ್ನಡವು ಕನ್ನಡಿಗರಿಂದಲೇ ನಿರ್ಲಕ್ಷಿಸಲ್ಪಡುತ್ತಿರುವುದು ಕನ್ನಡಿಗರೆಲ್ಲರು ಏಕಮನದಿಂದ ಚಿಂತನಮಂಥನಕ್ಕೆ ತೊಡಗಿ, ಕನ್ನಡಪರ ಕಾರ್ಯ ಪ್ರವೃತ್ತರಾಗಬೇಕಾದ ಗಂಭೀರ ಸಮಸ್ಯೆ. ಕನ್ನಡನಾಡಿನಲ್ಲಿ ಕನ್ನಡದ ರಕ್ಷಣೆಗೆ, ಪ್ರಚಾರಕ್ಕೆ ಕನ್ನಡಿಗರು ಹೋರಾಡಬೇಕಾದ ಪರಿಸ್ಥಿತಿ ಉಂಟಾಗಿರುವುದು ನಾಚಿಕೆಗೇಡು. ಸ್ವಾರ್ಥಸಾಧಕರಿಗೆ ನಾಚಿಕೆಯ ಪ್ರಶ್ನೆಯೆಲ್ಲಿದೆ ? ಭಾರತದಲ್ಲಿ ಭಾಷಾವಾರು ರಾಜ್ಯಗಳ ಸ್ಥಾಪನೆಗೊಂಡ ಬಳಿಕವೂ ಭಾಷಾಭಿಮಾನದ ಪಟ್ಟಿಯಲ್ಲಿ ರಾಷ್ಟ್ರದಲ್ಲಿಯೇ ಕನ್ನಡಿಗರು ಕೊನೆಯ ಸ್ಥಾನದಲ್ಲಿದ್ದಾರೆಂದರೆ, ಅತಿಶಯೋಕ್ತಿಯಲ್ಲ; ಅದು ವಾಸ್ತವಿಕವಾಗಿದೆ. ಕರ್ನಾಟಕದ ನೆರೆಹೊರೆಯ ರಾಜ್ಯಗಳಲ್ಲಿ ಆಯಾ ರಾಜ್ಯಭಾಷೆಗಳು ನಿರಂಕುಶ ಪ್ರಭುತ್ವದಿಂದ ಗೌರವಾನ್ವಿತವಾಗಿ ಆಡಳಿತೆಯಲ್ಲಿ, ವ್ಯವಹಾರದಲ್ಲಿ, ಜನಮಾನನದಲ್ಲಿ ಕೂಡಿದ್ದು ಪ್ರಗತಿ ಪಥದಲ್ಲಿ ನಿರಂತರ ಬೆಳೆಯುತ್ತಿರುವುದನ್ನು ಕಂಡಾದರೂ ಕನ್ನಡಿಗರೇಕೆ ಕಣ್ಣು ಬಿಡುವುದಿಲ್ಲ? ಕನಿಷ್ಟ ಇತರರನ್ನು ಅನುಸರಿಸುವಂತಹ ಧೋರಣೆಯನ್ನಾದರೂ ಭಾಷಾಭಿಮಾನದ ದೃಷ್ಟಿಯಿಂದ ತಂದರೆ ಸಾಕಲ್ಲವೆ? ಕರ್ನಾಟಕದಲ್ಲಿ ಕನ್ನಡ ರಾಜ್ಯಭಾಷೆಯಾಗಿ ನಿರಂಕುಶ ಪ್ರಭುತ್ವವನ್ನು ಮೆರೆಯುವುದನ್ನು ಬಿಟ್ಟು ತನ್ನರಾಜ್ಯದಲ್ಲಿಯೇ ಎರಡನೆಯ ಪ್ರಜೆ-ಯಂತೆ ಇರುವುದು ತುಂಬಾ ವಿಷಾದನೀಯವಾಗಿದೆ ಕನ್ನಡಿಗರು ಇನ್ನಾದರೂ ಕಣ್ಣು ತೆರೆಯಬೇಕು.

ಯಾವುದೇ ಜನಾಂಗವೊಂದನ್ನು ಧರ್ಮ, ಜಾತಿ, ಭಾಷೆ, ರಾಷ್ಟ್ರಕ್ಕೆ ಸಂಬಂಧಿಸಿದಂತೆ ಗುರುತಿಸುತ್ತೇವೆ. ಅಂತೆಯೇ ಕನ್ನಡ ಮಾತೃಭಾಷೆಯವರು ಕನ್ನಡಿಗರು ಮರಾಠಿ ಮಾತೃಭಾಷೆಯವರು ಮರಾಠಿಗರು ಎಂದು ನಾವು ಭಾಷೆಯ ಆಧಾರದಿಂದ ವರ್ಗೀಕರಿಸುತ್ತೇವೆ. ಭಾರತದ ಭಾಷೆಗಳ ಪ್ರಾಚೀನತೆಯನ್ನು ಉಪಲಬ್ಧವಿರುವ ಸಾಹಿತ್ಯಕ ಕೊಡುಗೆಗಳಿಗನ್ವಯಿಸಿದಾಗ ಸಂಸ್ಕೃತ, ತಮಿಳು ಅನಂತರ, ಕನ್ನಡ, ಮೂರನೆಯ ಪ್ರಾಚೀನ ಭಾಷೆಯೆಂಬುದು ಅತ್ಯಭಿಮಾನ ಪಡುವಂತಾಗಿರುತ್ತದೆ. ಸುಮಾರು ಒಂದುವರೆಸಾವಿರ ವರ್ಷಗಳ ಶ್ರೀಮಂತ ಸಾಹಿತ್ಯಕ ಇತಿಹಾಸವನ್ನು ಹೊಂದಿರುವ ನೂರಾರು ಮಹಾನ್ ಕೃತಿಗಳಿಂದ ಕೂಡಿರುವ ಕನ್ನಡ ಭಾಷೆಯ ಹಿರಿಮೆ ಗರಿಮೆ ಪ್ರಶ್ನಾತೀತ; ಅಷ್ಟೇ ಅಭಿಮಾನಾಸ್ಪದವಾದುದು ಹೀಗಿದ್ದರೂ, ಕನ್ನಡಿಗರಿಂದು ನೆರೆಹೊರೆಯ ಮರಾಠಿ, ತೆಲುಗು, ತಮಿಳು, ಮಲೆಯಾಳವ್, ಭಾಷಿಕರ ಭಾಷಾಭಿಮಾನದ ಮುಂದೆ ಕುಬ್ಜರಾಗಿರುವಂತೆ ಮಾಡುವ ವಿಧಿ-ವಿಧಾನ

ಗಳನ್ನು ರೀತಿನೀತಿಗಳನ್ನು ದೋಷ ಲೋಪಗಳನ್ನು ಮೂಲಸಹಿತ ಕಿತ್ತುದೂರ ಮಾಡದಿದ್ದರೆ ಭವಿಷ್ಯದಲ್ಲಿ ಕನ್ನಡ ಭಾಷೆಯನ್ನಾಡುವ ಜನರೆಷ್ಟು? ಕನ್ನಡ ಪ್ರದೇಶ ವಿಸ್ತೀರ್ಣವೆಷ್ಟು? ಕನ್ನಡ-ಕರ್ನಾಟಕ ಹೇಗೆ ಕ್ಷೀಣಿಸಬಹುದೆಂಬುದನ್ನು ಸಕಾರಣ ಗಳೊಂದಿಗೆ ಲೆಕ್ಕಾಚಾರದಿಂದ ಪರೀಕ್ಷಿಸತೊಡಗಿದಾಗ ಪ್ರಜ್ಞಾವಂತ ಕನ್ನಡಿಗರ ಮನಸ್ಸಿನಲ್ಲಿ ದಿಗಿಲುಂಟಾಗುತ್ತದೆ; ಇಲ್ಲಿ ಕರ್ನಾಟಕದ ವಿಭಿನ್ನ ಆಂತರಿಕ ಸಮಸ್ಯೆಗಳನ್ನು ಸೇರಿಸಿಕೊಂಡೇ ಹೇಳಲಾಗಿದೆ.

ಜನ್ಮ ನೀಡಿದ ಜನನಿಯ ಭಾಷೆಯನ್ನು ಮಕ್ಕಳು ತಿರಸ್ಕರಿಸಬೇಕಾದರೆ ಆ ಮಕ್ಕಳನ್ನು ತಾಯಿ ಎಂತಹ ಸಂಸ್ಕೃತಿಯಲ್ಲಿ ಬೆಳೆಸಿರಬೇಕೆಂಬ ಯಕ್ಷ ಪ್ರಶ್ನೆ ಹೆಬ್ಬಾವಿನಂತೆ ತಲೆಯೆತ್ತಿ ನಿಲ್ಲುತ್ತದೆ. ಮಾತೃನುಡಿಯು ಕಂದನ ಹೃದಯ ಮಿಡಿತವನ್ನು ಅಂತರಂಗದ ಧ್ವನಿಯನ್ನು ಅರ್ಥಪೂರ್ಣ ರೀತಿಯಲ್ಲಿ ವ್ಯಕ್ತಗೊಳಿಸುವ ಅಭಿವ್ಯಕ್ತ ರೂಪ. ತಾಯಿಯ ಮಾತೃಭಾಷೆಯೇ ಮಕ್ಕಳ ಮಾತೃಭಾಷೆಯಾಗಿರುತ್ತದೆಂಬುದು ನಿರ್ವಿವಾದ. ಎದೆಹಾಲನ್ನಿತ್ತು ಲಾಲನೆಪಾಲನೆ ಮಾಡುತ್ತ ಬೆಳೆಸುತ್ತಿರುವಾಗ ನೀಡುವ ಜೀವನ ಸಂದೇಶದ ಮಾರ್ಗದರ್ಶನದ ಸತ್ವಪೂರ್ಣ ಅಭಿವ್ಯಕ್ತಿಯ ಮಾಧ್ಯಮ ಆ ಮಾತೆ ಆಡುವ ಕಲಿಸಿದ ಭಾಷೆ. ಅದುವೇ ಮಾತೃಭಾಷೆ. ತಾಯಿಯೊಬ್ಬಳ ಶಿಶುವು ಬೆಳೆದು ಕುಲದೀಪಕನಾಗಿರಬೇಕೆ ಹೊರತು ಕುಲಕಂಠಕನಾದರೆ ಹೇಗೆ ಮಾತೃಹೃದಯ ಅವ್ಯಕ್ತವೇದನೆಯಿಂದ ನರಳಬಹುದೋ ಹಾಗೆಯೇ ಭಾಷಿಕ ನೋರ್ವನು ಮಾತೃ ಭಾಷೆಯನ್ನು ತಿರಸ್ಕಾರದಿಂದ ನೋಡುವುದು ಮಾತೃದ್ರೋಹ ಬಗೆದಂತಲ್ಲವೇ?

ಮಾತೃಭಾಷಾಭಿಮಾನದ ಬೀಜ ಮನಸಿನಂಗಳದಲ್ಲಿ ನೊಳಕೆಯೊಡದು ಬೇರು ಬಿಟ್ಟು ಹೆಮ್ಮರವಾಗಿ ಬೆಳೆದು ವ್ಯಕ್ತಿತ್ವದ ಅವಿಭಾಜ್ಯ ಅಂಗವಾಗಬೇಕು. ಭಾಷಾಭಿಮಾನ ಕೇವಲ ಆವೇಶದ ಮಾತಾಗಿರದೆ ಆತ್ಮಾಭಿಮಾನಭರಿತ ಒಳದನಿಯಾಗಿರಬೇಕು. ಅದು ಲೆಕ್ಕಾಚಾರದ ಮಾತಾದರೆ ಅರಿವಿನ ಅಕ್ಕರೆಯ ಅಭಿವ್ಯಕ್ತಿಯ ಶಕ್ತಿಯುತ ಮಾಧ್ಯಮ ವಾಗಿರಬೇಕು. ಕನ್ನಡಾಭಿಮಾನ ಹೇಳಿಕೆಯ ಪದವಾಗಿರಬಾರದು; ಬಾಳಿನ ಮಂತ್ರ ವಾಗಿರಬೇಕು. ಭಾವನಾತ್ಮಕ ವಚನಗಳಿಂದ ಕೂಡಿರಬೇಕು. ಮಾತೃಭಾಷೆಯೊಡನೆ ಆ ಭಾಷಿಕನ ಅಸ್ತಿತ್ವವಿಡೆ. ತಾಯ್ನುಡಿಯೇ ಆತನ ಪರಿಚಯದ ಸಂಕೇತ. ಭಾಷೆ ಸಂಸ್ಕೃತಿಗಳೆರಡೂ ವಿಭಜಿಸಲಾರದವುಗಳಾಗಿವೆ. ಮಾತೃಭಾಷೆಯನ್ನು ತ್ಯಜಿಸಿ ಪರಾಧೀನವಾಗುವುದೆಂದರೆ ಜನ್ಮ ನೀಡಿದ ತಾಯಿಯನ್ನು ಬಿಟ್ಟು ಮಲತಾಯಿಯನ್ನು ಅಪ್ಪಿಕೊಂಡರೆ. ವಿಕೃತ ಮನೋಭೂಮಿಕೆಯಲ್ಲಿ ಕ್ಷುಲ್ಲಕ ಕಾರಣಗಳನ್ನಿತ್ತು ಸ್ವಾಭಿಮಾನ ಶೂನ್ಯರಾಗಿ ಬದುಕುವಲ್ಲಿ ಯಾವ ಪುರುಷಾರ್ಥವಿದೆಯೆಂಬುದರ ಸಮುಚಿತ್ತ ಭಾವದಿಂದ ಸಮಗ್ರ ಕನ್ನಡ ಜನಕೋಟಿ ಗಂಭೀರ ಚಿಂತನೆಗೆ ತೊಡಗಿಸಿಕೊಂಡು ಸಮಂಜಸ ನಿವಾರಣೋಪಾಯಗಳಿಂದ ಕನ್ನಡ ಜನಜಾಗೃತಿಗೊಳಿಸುವ ಅನಿವಾರ್ಯ ತಥಾ ಅತ್ಯಗತ್ಯ ಪರಿಸ್ಥಿತಿ ಇಂದು ಕನ್ನಡಿಗರಿಗೆ ಬಂದೊದಗಿರುವುದು ಅತ್ಯಂತ ದುರಾದೃಷ್ಟ, ಅನಪೇಕ್ಷಣೀ ದುಃಖದಾಯಕ ಸಂಗತಿಯಾಗಿರುತ್ತದೆ.

" ಸೌಜನ್ಯ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ "

# ಶ್ರೀ ಗುರು ಚೆನ್ನವೀರ

—ಬಿ. ಮಲ್ಲಿಕಾರ್ಜುನ, ನಂ 5/4/60, ಸೋಮವಾರಪೇಟೆ, ರಾಯಚೂರು-584101

ಅಯ್ಯಾ,

ಒಂದರಿಂದ ಎರಡು ಮಾಡಿಟ್ಟೆ,
ಎರಡರಿಂದ ಮೂರು ನಾಲಕು
ನಾಲಕರಿಂದ ಹತ್ತು ಮಾಡಿಟ್ಟೆ,
ಹತ್ತರಿಂದ ನೂರು ಮಾಡಿಟ್ಟೆ,
ಹೀಗೆ ಸೊನ್ನೆಯು ಬೆಳೆ ಅನಂತವಾಗಿಸಿದೆ,
ಅನಂತನಾಗಿ ಅನಂತ ಮಾಡಿಟ್ಟೆ
ಆವ ಕಾರಣಕೆ ಹೀಗೆಲ್ಲ ಮಾಡಿಟ್ಟೆ,
ನೀ ಮಾಡಿದ ಮಾಟವ ನೋಡಿ
ನಾ ಬೆರಗಾದೆ ನೋಡಾ ಶ್ರೀ ಗುರುವೆ ಚನ್ನವೀರ,

ಶಿವ, ಶಿವ, ಮಹಾದೇವ
ನಿನ್ನ ಲೀಲೆಯು ಕಂಡು
ನಾ ಬೇರಗಾದೆನಯ್ಯ,
ನಿನ್ನ ಲೀಲೆಯ ನೆನೆಯುವ
ಪರಿ ಎನಗೇತಕಯ್ಯ,
ನಿನ್ನ ಲೀಲೆಯು ಅನಂತ ಅಪರಿಮಿತವು,
ಅದು ತಿಳಿಯ ಹೊರಟರೆ
ಏಸು ಜನುಮವು ಸಾಲದಯ್ಯ,
ಅದರಗೊಡವೆ ಎನಗೇತಕಯ್ಯ,
ನಿನ್ನ ಬಳಗದವರ ಸಂಗವನೇ
ಕರುಣಿಸಿ, ಸಲಹಯ್ಯಾ, ಎನಗೆ
ನಿಮ್ಮ ಧರ್ಮ, ಶ್ರೀ ಗುರುವೆ ಚನ್ನವೀರ

ಅಯ್ಯಾ,

ನಡೆ ನುಡಿಯಲ್ಲಿ ಸಿರಿವಂತರಾಗಿ
ಸತ್ಯ ಶುದ್ಧರಾಗಿ ದಯೆ, ದಾನ
ಧರ್ಮದಿ ತಿಳಿದು ನಡೆವವರನು
ಎನಗೊಮ್ಮೆ ತೋರಾ ಶ್ರೀ ಗುರುವೆ
ಅವರ ದರುಶನ ಎನ್ನ ಸೌಭಾಗ್ಯವೆಂಬೆ
ಎನ್ನ ಪುಣ್ಯದ ಫಲವೆಂಬೆನಯ್ಯ
ಶ್ರೀ ಗುರುವೆ ಚನ್ನವೀರ (ಮುಂದುವರಿಯುತ್ತದೆ)

(92 ಆಗಸ್ಟ್ – ಸೆಪ್ಟೆಂಬರ್ – ಅಕ್ಟೋಬರ್ – 93 ಜನವರಿ ಸಂಚಿಕೆಗಳಲ್ಲಿ)

# ದೇಶದ ಅವನತಿಗೆ ಮುದ್ರಣ ಮಾಧ್ಯಮ ಹೊಣೆಯಾಗಿಲ್ಲ

—ಡಾ॥ ಪಾಂಡುರಂಗ ಪಾಟೀಲ, ಸಂಪಾದಕರು, ನವನಾಡು ದಿನಪತ್ರಿಕೆ, ಹುಬ್ಬಳ್ಳಿ.

ದೇಶ ಅಂದರೆ ಕಲ್ಲು ಮಣ್ಣು ಕಟ್ಟಡಗಳಲ್ಲ. ಇದೊಂದು ಜೀವಂತಿಕೆಯ ಸಮಗ್ರತೆ. ಇದರ ಸಮಗ್ರತೆಯ ಸರ್ವಾಂಗೀಣ ಉನ್ನತಿಯೇ ದೇಶದ ಉನ್ನತಿ. ಒಂದು ದೇಶ ಮತ್ತು ಅದರ ಉನ್ನತಿಗೆ ಸಂಪೂರ್ಣ ಜವಾಬ್ದಾರಿ ಆ ದೇಶದ ಪತ್ರಿಕೆಗಳ ಮೇಲಿರುತ್ತದೆ.

ಮುದ್ರಣ ಮಾಧ್ಯಮ ಅಂದರೆ ಪತ್ರಿಕೆಗಳನ್ನು ಹೊರತು ಪಡಿಸಿದ ಸುದ್ದಿ ಮಾಧ್ಯಮಗಳೆಲ್ಲ ನಮ್ಮ ದೇಶದ ಆಡಳಿತ ವ್ಯವಸ್ಥೆಯ ಸ್ವಾಧೀನದಲ್ಲಿರುವದರಿಂದ ಈ ಮೂಲಗಳು ಕೇವಲ ಸರ್ಕಾರದ ಎಜೆನ್ಸಿಗಳು ಮಾತ್ರ.

ಈ ದೇಶದಲ್ಲಿರುವ ಪ್ರತಿ ಪತ್ರಿಕೆಯು ಸ್ವಾಯತ್ತತೆಯನ್ನು ಹೊಂದಿದ್ದು, ನಿಯಂತ್ರಿತ ಕಾನೂನು ಚೌಕಟ್ಟು ಹೊಂದಿದ್ದರೂ ನಮ್ಮ ದೇಶದ ಪತ್ರಿಕಾ ಸ್ವಾತಂತ್ರ್ಯ ಅಭಿವ್ಯಕ್ತಿ ಸ್ವಾತಂತ್ರ್ಯ ಮತ್ತು ನಿರ್ವಹಣಾ ಸ್ವಾತಂತ್ರ್ಯಗಳನ್ನು ಕ್ರೋಢೀಕರಿಸಿ ಪರರಾಷ್ಟ್ರಗಳ ಪತ್ರಿಕಾ ಕಾನೂನನ್ನು ತುಲನೆ ಮಾಡಿ ನೋಡಿದಾಗ ನಮ್ಮ ದೇಶದಲ್ಲಿ ಬಹುತರ ಅನುಕೂಲ ಇದೆ.

ಪ್ರಜಾಪ್ರಭುತ್ವ ರಾಷ್ಟ್ರವಾದ ನಮ್ಮ ಭಾರತದಲ್ಲಿ ಪತ್ರಿಕಾ ಮಾಧ್ಯಮಗಳು ವ್ಯವಸ್ಥೆಯ ನಾಲ್ಕನೇ ಅಂಗವಾಗಿ ರೂಪುಗೊಂಡಿದ್ದರೂ ಈ ದೇಶದ ಅವನತಿಯಲ್ಲಿ ಪತ್ರಿಕಾ ಮೂಲದ ಪಾತ್ರವೂ ಇದೆಯೆಂದು ಬೇರೆ ವಿವರಿಸಬೇಕಾಗಿಲ್ಲ.

ಪತ್ರಿಕಾ ಮೂಲಗಳು ತಮ್ಮ ಪ್ರಾಂಜ್ವಲತೆ, ನಿಷ್ಠುರತೆ ನೈತಿಕತೆಗಳನ್ನು ಉಳಿಸಿ-ಕೊಂಡಿದ್ದರೆ ಈ ದೇಶ ಬೇರೆ ಆಗಿರಬಹುದಿತ್ತು. ಆದರಿಂದು ಹಾಗೆ ಆಗಿಲ್ಲ.

ಪತ್ರಿಕೆಗಳ ಬದುಕು ಎಷ್ಟು ಮುಖ್ಯವೋ ಅಷ್ಟೇ ಅವುಗಳ ಸತ್ವವೂ ಮುಖ್ಯ. ಈಗಿನ ವ್ಯವಸ್ಥೆಯಲ್ಲಿ ಕೆಲವೇ ಕೆಲವು ಪತ್ರಿಕೆಗಳು ಈ ನಿಟ್ಟಿನಲ್ಲಿ ಕೊಂಚ ಪ್ರಯತ್ನ ನಡೆಸಿರುವುದನ್ನು ಒಪ್ಪುವ ನಾವುಗಳು ಬಹುಪಾಲು ಪತ್ರಿಕೆಗಳೆಲ್ಲ ತಮ್ಮ ಕರ್ತವ್ಯದಲ್ಲಿ ವಂಚಿತಗೊಂಡಿರುವದನ್ನೂ ಒಪ್ಪ ಬೇಕಾಗುವದು.

ಪತ್ರಿಕೆಗಳು ಮೂಲಭೂತವಾಗಿ ನಿರ್ವಹಿಸುತ್ತಿರುವ. ಪ್ರಕಟಿಸುತ್ತಿರುವ ಸುದ್ದಿಗಳ ಸಂಖ್ಯೆಯ ಬಹುಪಾಲು ಸುದ್ದಿಗಳು ರಾಜಕೀಯ ವ್ಯಕ್ತಿ ಆ ಪಕ್ಷಗಳು ಆ ಪಕ್ಷದ ಒಡಕು ಭಿನ್ನಾಭಿಪ್ರಾಯ, ಆರೋಪ, ಪ್ರತ್ಯಾರೋಪ ಮುಂತಾಗಿ ಬಿಂಬಿಸಿ ಮಿಕ್ಕ ಕೊಂಚ ಸುದ್ದಿಗಳು ಮಂತ್ರಿಗಳ ಹೇಳಿಕೆ. ವಿರೋಧ ಪಕ್ಷಗಳ ದೂರು ವಿವರಿಸಿದರೆ ಇನ್ನುಳಿದ ಕೊಂಚ ಸಂಖ್ಯೆಯ ಸುದ್ದಿಗಳು ಕೊಲೆ, ಸುಲಿಗೆ, ಅಪಘಾತ, ಮಾನಭಂಗ, ಆತ್ಮಹತ್ಯೆಯ ಸುದ್ದಿಗಳನ್ನು ಸುತ್ತಿಕೊಂಡಿರುತ್ತವೆ.

ಈ ಎಲ್ಲವುಗಳನ್ನು ಕ್ರೋಢೀಕರಿಸಿದ ನಂತರ ಅಭಿವೃದ್ಧಿ ವಿಷಯಕ್ಕೆ ಸ್ಥಾನಿಕ ತೊಂದರೆಗಳ ವಿವರಣೆ, ವೈಜ್ಞಾನಿಕ ಸಾಧನೆಗಳು, ರೈತರ ನೋವು ನಲಿವು ಮುಂತಾಗಿ ಎಲ್ಲೋ ಒಂದು ಮೂಲೆಯಲ್ಲಿ ಪ್ರಕಟಗೊಂಡು ಮಾಯವಾಗುತ್ತದೆ.

ಯಾವ ರಾಷ್ಟ್ರದಲ್ಲಿ ಯಾವ ಪತ್ರಿಕೆಗಳು ನಿತ್ಯ ದೇಶದ ಅಭಿವೃದ್ಧಿಪರ ಸುದ್ದಿಗಳನ್ನು ಜನಸಾಮಾನ್ಯರ ಸ್ಪಂದನೆಯ ಸುದ್ದಿಗಳನ್ನು ಕೈಗಾರಿಕೆ, ಕಾರ್ಮಿಕ, ಕೃಷಿ, ಶಿಕ್ಷಣ. ತಂತ್ರಜ್ಞಾನ ಸುದ್ದಿಗಳೊಂದಿಗೆ ಆರ್ಥಿಕ ಮೂಲದ ಸುದ್ದಿಗಳನ್ನು ಪ್ರಾಧಾನ್ಯವಾಗಿ ಪ್ರಕಟಿಸುವದಿಲ್ಲವೋ ಆ ದೇಶದಲ್ಲಿ ಪ್ರಗತಿಗೆ ಅವಕಾಶ ಇರುವದಿಲ್ಲ.

ಒಂದು ವಿಚಿತ್ರ ಸಂಗತಿಯೆಂದರೆ ದೇಶವನ್ನು ಆಳುವ ಸರಕಾರಗಳು. ತಮ್ಮ ಯೋಜನೆಗಳನ್ನು ಜನಪರ ಕಾರ್ಯಗಳನ್ನು ಜನತೆಗೆ ತಲುಪಿಸಬೇಕಾದ ಯೋಜನಾ ವಿವರಗಳನ್ನು ಜಾಹೀರಾತಿನ ಮುಖಾಂತರ ಬಿತ್ತರಿಸುತ್ತದೆ. ಅಥವಾ ಅದಾವುದೋ ಒಂದು ಸಣ್ಣ ತುಣುಕು ಸುದ್ದಿಯೆಂದು ಸರಕಾರದ ಆಡಳಿತ ಯಂತ್ರಗಳ ಮುಖಾಂತರ ಪತ್ರಿಕೆಗೆ ಬಿಡುಗಡೆ ಮಾಡುತ್ತದೆ.

ಒಬ್ಬ ರಾಜಕೀಯ ವ್ಯಕ್ತಿಯ ಅವಹೇಳನ ಅಥವಾ ಆರೋಪ ಎಷ್ಟು ತೀಕ್ಷ್ಣ ಮತ್ತು ತೀವ್ರವಾಗಿ ಪ್ರಸಾರ ಹೊಂದುತ್ತದೆಯೋ ಅಷ್ಟು ವೇಗದಲ್ಲಿ ಸರಕಾರದ ಜನಪರ ಯೋಜನೆಯು ಫಲಾನುಭವಿಗಳಿಗೆ ತಲುಪುವದಿಲ್ಲ. ಒಬ್ಬ ಅಧಿಕಾರಿ ಮಾಡಿದ ತಪ್ಪು ಪಡೆದ ಸುದ್ದಿಯು ಅಳತೆಯು ಒಬ್ಬ ಅಧಿಕಾರಿ ಮಾಡಿದ ಒಳ್ಳೆಯ ಕೆಲಸ ಸುದ್ದಿಗೆ ಬಾರದು.

ರಾಜಕೀಯ ವ್ಯಕ್ತಿಗಳ ಸಂದರ್ಶನ ಅಥವಾ ಪತ್ರಿಕಾ ಸಭೆಗಳಲ್ಲಿ ಮುಖ್ಯವಾಗಿ ಕಾಣದೋರುವದು ಆ ವ್ಯಕ್ತಿ ನೀಡಿದ ಆರೋಪಪಟ್ಟಿ. ಅಲ್ಲದೆ ತಾಸಾನು ತಾಸು ನಮ್ಮ ಪತ್ರಿಕಾ ಪ್ರತಿನಿಧಿಗಳು ಕೇಳುವ ಪ್ರಶ್ನೆಗಳೆಲ್ಲ ರಾಜಕೀಯದ ಆರೋಪ ಪ್ರತ್ಯರೋಪಗಳು ಸಮಯ ಸಿಕ್ಕರೆ ಸಂಬಂಧಿಸಿದ ಅಭಿವೃದ್ಧಿ ಅಥವಾ ಜನಪರ ಕೆಲಸಗಳು.

ಸಾಮಾನ್ಯವಾಗಿ ಜನರ ತೊಂದರೆಗಳನ್ನು ಕ್ರೋಢೀಕರಿಸಿ ಸಂಬಂಧಿಸಿದ ಸಚಿವರು ಶಾಸಕರುಗಳನ್ನು ಕೇಳುವ ಪ್ರಶ್ನೆಗಳಿಗೆ ಪತ್ರಿಕಾ ಸಭೆಗಳಲ್ಲಿ ವಿರಳವಾಗಿ ಪರಿಗಣಿಸ ಬಹುದು.

ಇದೇ ಸಾಂದ್ರತೆಯು ನಮ್ಮ ಮುದ್ರಣ ಮಾಧ್ಯಮ ವರದಿಗಾರರೆಲ್ಲ ಬರೆದು ಪ್ರಕಟಿಸುವ ಸುದ್ದಿಗಳು ಆ ರಾಜಕೀಯ ವ್ಯಕ್ತಿಗೆ ಸಂಬಂಧಿಸಿದಂತೆ ದೊಡ್ಡದಾಗಿ ಮೂಡಿ ಬರುತ್ತದೆ.

ಒಬ್ಬ ಸಾಮಾನ್ಯ ಓದುಗ ನೇರವಾಗಿ ಒಂದು ಪ್ರಶ್ನೆ ಹಾಕುತ್ತಾನೆ. ಈ ತರದ ಅಗೌರವ, ಅನೀತಿಯ, ಅನಾದರದ, ಅಶ್ಲೀಲ, ಅಉಪಚಾರಕ, ಅವನತಿಯ ಅಧರ್ಮದ ಸುದ್ದಿಗಳನ್ನೇ ಓದುವುದಾದರೇ ಪತ್ರಿಕೆಗಳನ್ನು ಏಕೆ ಓದಬೇಕು ಕೊಳ್ಳಬೇಕು?

ಇತ್ತೀಚಿನ ಒಂದು ಉದಾಹರಣೆಯನ್ನು ವಿವರಿಸಿದ ಒಬ್ಬ ಸಾಮಾನ್ಯ ಓದುಗ, ವೀರಪ್ಪನ್ ಯಾರು ? ಎಂದು ಪ್ರಶ್ನಿಸಿ ಇಂತಹ ಒಬ್ಬ ದೇಶದ್ರೋಹಿ ಸಾಮಾಜಿಕ ಘಾತುಕಶಕ್ತಿಯ ಬಗ್ಗೆ ಇಷ್ಟೊಂದು ದೊಡ್ಡದಾದ ಸುದ್ದಿ ಬರೆದು ಪ್ರಕಟಿಸಿದ ಆತನನ್ನು 'ಹೀರೊ' ನನ್ನಾಗಿ ಮಾಡುವದೂ ಒಂದು ದೇಶದ್ರೋಹತನ, ಸಾಮಾಜಿಕ ಅನಿಷ್ಟತೆ-ಯೆಂದು ವಿಮರ್ಶಿಸುವ ಸಾಮಾನ್ಯನ ಭಾವನೆಗಳನ್ನು ಕೊಂಚ ಮುದ್ರಣ ಮಾಧ್ಯಮದ ಚೈತನ್ಯಶೀಲರು ವಿಚಾರಿಸಬೇಕಾಗಿದೆ.

ಹರ್ಷದ ಯಾರು? ಪ್ರಸಾರ ಎಷ್ಟು? ಅವನ ಬಗ್ಗೆ ಈ ಮುದ್ರಣ ಮಾಧ್ಯಮಗಳು ತೋರಿದ ನಿಲುವಿನಿಂದ ಆದ ಪರಿಣಾಮವೇನು? ಇದರಿಂದ ಈ ದೇಶದ ಜನಾಂಗದ ಮೇಲೆ ಮೂಡಿದ ಛಾಯೆ ಯಾವ ತರದ್ದು. ಕೊಂಚ ಅವಲೋಕಿಸಬೇಕಲ್ಲವೆ.

ಓರ್ವ ಯುವತಿಯ ಮೇಲೆ ಸಮೂಹ ಮಾನಭಂಗ ನಡೆಯಿತು. ಇದನ್ನು ಅತೀವ ಪ್ರಚಾರಕ್ಕೆ ಗುರಿ ಪಡಿಸಿದ ನಂತರ ಆ ಯುವತಿ ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕುವ ಬಗ್ಗೆ ಹೇಗೆ ಈ ಹಂತದಲ್ಲಿ ಮುದ್ರಣ ಮಾಧ್ಯಮಗಳು ಈ ನೊಂದ ಜೀವಕ್ಕೆ ದೊರಕಿಸಿದ ಸಹಕಾರ, ಸಾಮಾಜಿಕ ಮೌಲ್ಯಗಳಿಗೆ ನೀಡಿದ ಸ್ಪಂದನೆಯೇನು ?

ಓರ್ವ ಉತ್ತಮ ಕೆಲಸಗಾರನ ಮೇಲೆ ಅನಿಷ್ಟ ಶಕ್ತಿಗಳ ವ್ಯವಸ್ಥಿತ ಲಾಭಕ್ಕಾಗಿ ಮಾಡುವ ಆಧಾರ ರಹಿತ ಆರೋಪಗಳನ್ನು ಪ್ರಕಟಿಸಿ ಓರ್ವ ಜನಪರ ವ್ಯಕ್ತಿಯ ನೈತಿಕತೆಯನ್ನು ಶಿಥಿಲಗೊಳಿಸಿದಾಗ ಸಾಮಾಜಿಕ ರಾಜಕೀಯ ವ್ಯವಸ್ಥೆಯಲ್ಲಿ ಈ ಮಾಧ್ಯಮಗಳು ಆಡಿದ ಪಾತ್ರವೇನು ? ಈ ತರದ ಅನೇಕ ಪ್ರಶ್ನೆಗಳನ್ನು ನಮ್ಮ ದಿನನಿತ್ಯದ ಪತ್ರಿಕೆಗಳು ಪ್ರಜ್ಞಾವಂತರಿಗೆ ನೀಡುತ್ತಿವೆ.

ಈ ದೇಶ ಅನಿಷ್ಟತೆಯತ್ತ ಶಿಥಿಲತೆಯತ್ತ ಅನಾಗರಿಕತೆಯತ್ತ ದಿವಾಳಿತನದತ್ತ ಹೀಗೆ ಹಲವು ವಿಧದಲ್ಲಿ ವಿನಾಶದತ್ತ ನಡೆದ ಈ ದೇಶದ ಸ್ಥಿತಿಯ ಬಗ್ಗೆ ಪ್ರತಿಯೊಬ್ಬರಿಗೂ ಪರಿಜ್ಞಾನವಿದೆ. ಆದರೂ ಇದನ್ನು ಇನ್ನೂ ಕೆಡದಂತೆ ರಕ್ಷಿಸಿ ಜನತೆಯಲ್ಲಿ ದೇಶಾಭಿಮಾನ ತುಂಬಿ ಸುಭದ್ರತೆಯತ್ತ ಕೊಂಡೊಯ್ಯುವ ಕೆಲಸ ಮಾಡುವ ತಾಕತ್ತು ಇರುವುದು ಈ ದೇಶದ ಪತ್ರಿಕಾ ಸಮುದಾಯಕ್ಕೆ ಮಾತ್ರ.

ಇಂದು ಪತ್ರಿಕೆಗಳು ಮತ್ತು ಪತ್ರಿಕಾ ರಂಗದ ಪ್ರತಿಯೊಬ್ಬ ವ್ಯಕ್ತಿ ತನ್ನ ನಿಲುವನ್ನು ಬದಲಿಸಿದರೆ ಈ ದೇಶ ಜಾಗತಿಕ ಮಟ್ಟದಲ್ಲಿ ಭದ್ರತೆಯನ್ನು ತಾಳಬಲ್ಲದು. ಅಷ್ಟೇ ಅಲ್ಲ. ಶರವೇಗದಲ್ಲಿ ಜಾಗತಿಕ ರಂಗದಲ್ಲಿ ಭಾರತ ಧ್ರುವತಾರೆಯಂತೆ ಕಾಣಬಲ್ಲದು. ಆ ಭಾರ ಸಮೂಹ ಮಾಧ್ಯಮಗಳ ಪತ್ರಿಕಾ ವ್ಯವಸ್ಥೆಯ ಮೇಲಿದೆ. ಆದರೆ ಇದನ್ನು ಪ್ರಜ್ಞಿಸುವವರು ಯಾರು ?

ಸ್ಥಾಪನೆ : 1943

ತಂತಿ : 'ವೀರಶೈವ'

ಕೆ.ಎಸ್.ಟಿ. 73606285
ಸಿ.ಎಸ್.ಟಿ. 73656288 } ದಿ 24-8-62    ಕೇಂದ್ರ ಕಛೇರಿ : { 72866 70204

# ವೀರಶೈವ ಸಹಕಾರ ಸಂಘ, ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅಪರ್ಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆಗಳ ಮೂಲಕ ವಿತರಣೆ.
ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1991-92 ನೇ ಸಾಲಿನಲ್ಲಿ ಷೇರು ಬಂಡವಾಳ :
ಸದಸ್ಯರಿಂದ ರೂ. 4.70 ಲಕ್ಷ
ಸರ್ಕಾರದಿಂದ ರೂ. 13-42 ಲಕ್ಷ
ಒಟ್ಟು ರೂ. 18.12 ಲಕ್ಷ

1) ಸದಸ್ಯರ ಸಂಖ್ಯೆ 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1540.40 ಲಕ್ಷ
3) ಆಪದ್ಧನ : ರೂ. 11.92 ಲಕ್ಷ
4) ಇತರೆ ನಿಧಿಗಳು : ರೂ. 32.00 ಲಕ್ಷ
5) 1991-92 ರಲ್ಲಿ ನಿವ್ವಳ ಲಾಭ : ರೂ. 04.05 ಲಕ್ಷ
6) ಸದಸ್ಯರಿಗೆ ಸೌಲಭ್ಯಗಳು :
ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 2 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ರಿಯಾಯಿತಿ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :
1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು
2) ಶ್ರೀ ಜಿ. ತೋಟದಪ್ಪನವರು
ಉಪಾಧ್ಯಕ್ಷರು
-: ನಿರ್ದೇಶಕರು :-
3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶ್ರೀ ವೈ. ಟಿ. ಮಹದೇವಪ್ಪನವರು
5) ಶ್ರೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
1) ಶ್ರೀ ಜಿ. ಶಿವಕುಮಾರ್‌ರವರು
11) ಶ್ರೀಮತಿ ಎಸ್. ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
ಸರ್ಕಾರದ ಪ್ರತಿನಿಧಿ, ನಿರ್ದೇಶಕರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ಉಪನಿಬಂಧಕರು ಸಹಕಾರ ಸಂಘಗಳ
ಉಪನಿಬಂಧಕರ ಕಚೇರಿ
ಬೆಂಗಳೂರು ನಗರ ಜಿಲ್ಲೆ
17) ಶ್ರೀ ಎನ್. ಡಿ. ಹನುಮಂತರಾಯಪ್ಪ
ಬಿ. ಡಿ ಸಿ. ಸಿ. ಬ್ಯಾಂಕ್
ನಿರ್ದೇಶಕರು.
18) ಕೆ. ಎನ್. ನರಸಿಂಹಸ್ವಾಮಿಯವರು
ಪ್ರಧಾನ ವ್ಯವಸ್ಥಾಪಕರು.

ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ, ಸ್ವಾದಿಷ್ಟಮಯ ಊಟ,
ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತಿವೆ.

**ಹೋಟೆಲ್**
**ಶ್ರೀ ನಂಜುಂಡೇಶ್ವರ**
ಊಟ, ವಸತಿ ಮತ್ತು
ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ
8597. 2373, 2577




Hotel Shree Nanjundeswara

**ಶ್ರೀ ನಂಜುಂಡೇಶ್ವರ**
**ಬೇಕರಿ**
ತುಮಕೂರು ಜಿಲ್ಲೆಯ ಪ್ರಖ್ಯಾತ
ಬೇಕರಿ
ಚಿಕ್ಕಪೇಟೆ ತುಮಕೂರು-1
ದೂರವಾಣಿ : 8077



**ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್**
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ
ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ : 2677

**ಟಿ.ಪಿ. ಮಹದೇವಯ್ಯ**

**ಶ್ರೀ ನಂಜುಂಡೇಶ್ವರ ಸ್ವೀಟ್ಸ್**
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ
ಬೇಕರಿ ತಿನಿಸುಗಳ ನಗರದ ಏಕೈಕ ಸ್ಥಳ
ಅಶೋಕ ರಸ್ತೆ ತುಮಕೂರು-1
ದೂರವಾಣಿ : 2077




ಸಿದ್ಧಗಂಗಾ ಪಾಲಿಟೆಕ್ನಿಕ್ ಹೊಸ ಕಟ್ಟಡದ ಶಂಕುಸ್ಥಾಪನೆ 2-12-93 ತುಮಕೂರು ಬಟವಾಡಿ ಬಳಿ ನಡೆದ ಸಮಾರಂಭದಲ್ಲಿ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಆಶೀರ್ವಚನ ನೀಡುತ್ತಿರುವುದು

ಚಿತ್ರದಲ್ಲಿ ಎಡಕ್ಕೆ ಶಿಲಾನ್ಯಾಸ ಫಲಕ ಅನಾವರಣ ಮಾಡಿದ ಭಾರತೀಯ ಅಣು ಆಯೋಗದ ಮಾಜಿ ಅಧ್ಯಕ್ಷ ಹಾಗೂ ವಿಶ್ವವಿಖ್ಯಾತ ವಿಜ್ಞಾನಿ ಡಾ॥ ರಾಜಾರಾಮಣ್ಣ, ಬಲಕ್ಕೆ ಮುಖ್ಯ ಅತಿಥಿ ಕರ್ನಾಟಕ ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ॥ ಶ್ರೀ ರಾಮೇಗೌಡ ಇವರನ್ನು ಕಾಣಬಹುದು.



ಶ್ರೀ ಮಠದಲ್ಲಿ ನ 28–ಡಿ. 1ರವರೆಗೆ ರಾಜ್ಯಮಟ್ಟದ ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಕುಸ್ತಿ–ಜಿಮ್ನಾಸ್ಟಿಕ್ ಸ್ಪರ್ಧೆಗಳ ಮುಕ್ತಾಯ ಸಮಾರಂಭದಲ್ಲಿ ಕನ್ನಡ-ಸಂಸ್ಕೃತಿ ಹಾಗೂ ಯುವಜನ ಕ್ರೀಡೆ ಸಚಿವರಾದ ಶ್ರೀ ಹೆಚ್- ವಿಶ್ವನಾಥ್ ಸಮಾರೋಪ ಭಾಷಣ ಮಾಡುತ್ತಿರುವುದು.

ಚಿತ್ರದಲ್ಲಿ ಅಧ್ಯಕ್ಷತೆ ವಹಿಸಿದ್ದ ಕಿರಿಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ಎಡಬಲ ತುದಿಗಳಲ್ಲಿ ಬಹುಮಾನ ವಿತರಣೆ ಮಾಡಿದ ಪು. ಜಿ, ಶಿ. ಉ. ನಿರ್ದೇಶಕರಾದ ಶ್ರೀ ಪಿ ಸುಬ್ಬರಾವ್, ಡೈ. ಶಿ. ಸಾ. ಶಿ. ಇ- ಆಯುಕ್ತರ ಕಛೇರಿ ಉ. ನಿರ್ದೇಶಕರಾದ ಶ್ರೀ ಟಿ. ಎಲ್. ಸಿದ್ಧರಾಮಯ್ಯ ಇವರನ್ನು ಕಾಣಬಹುದು.